# ಶ್ರೀ ಶಂಕರ ವಿಜಯ



ಎಂ. ಎಸ್. ಗಂಗಾಧರನ್







ನ್ಯೂಸ್ ಏಜೆನ್ಸಿ
ಟೆ, ಬೆಂಗಳೂರು ೨.

1—4—0

# ಶ್ರೀ ಶಂಕರ ವಿಜಯ

[ಆದಿಗುರು ಶ್ರೀ ಶಂಕರಾಚಾರ್ಯರ ಜೀವನ ಚರಿತ್ರೆ]



ಬರೆದವರು :

**ಶ್ರೀ ವಿದ್ವಾನ್ ಎಂ. ಎಸ್. ಗಂಗಾಧರ್**

ಅಧ್ಯಾಪಕರು, ಮಲ್ಲೇಶ್ವರಂ ಹೈಸ್ಕೂಲ್,

ಬೆಂಗಳೂರು

ಪ್ರಕಾಶಕರು :

**ಆರ್. ಎಸ್. ನ್ಯೂಸ್ ಏಜೆನ್ಸಿ**

**೬೬೫, ಚಿಕ್ಕಪೇಟೆ, : : ಬೆಂಗಳೂರು—೨.**

# ಮುನ್ನುಡಿ

---

ಶ್ರೀಮಚ್ಛಂಕರ ಭಗವತ್ಪೂಜ್ಯಪಾದರವರ ದಿವ್ಯಚರಿತ್ರೆಯನ್ನು ಐತಿಹಾಸಿಕ ದೃಷ್ಟಿಯಿಂದ ಬರೆದ ಗ್ರಂಥವಾವುದೂ ಇದುವರೆಗೂ ಕಂಡುಬಂದಿರುವುದಿಲ್ಲ. ಶ್ರೀಮಚ್ಛಂಕರರ ಚರಿತ್ರೆಯನ್ನು [illegible]ಗುವವರೂ ಕೂಡ ಆಚಾರ್ಯರ ಮೇಲಿನ ಪೂಜ್ಯಭಾವದಿಂದ ಅವರ ಮಹಿಮೆಗ[illegible]ನವಾಗಿಟ್ಟುಕೊಂಡು ಬರೆದಿರುತ್ತಾರೆ. ಐತಿಹಾಸಿಕ ದೃಷ್ಟಿಯಿಂದ ಬರೆಯುವುದೆಂಬುದು ನಮ್ಮ ಜನಾಂಗದಲ್ಲಿ ಅಷ್ಟಾಗಿ ರೂಢಿ ಇರಲಿಲ್ಲ. ಈಚೀಚೆಗೆ ಆ ರೂಢಿ ಬರುವ ಹೊತ್ತಿಗೆ ಆಚಾರ್ಯರ ಕಾಲವು ಬಹು ಹಿಂದಕ್ಕೆ ಹೋಗಿಬಿಟ್ಟಿತು. ಆದ್ದರಿಂದ ಶ್ರೀಮದಾಚಾರ್ಯರ ಸಂಗತಿಗಳನ್ನು ಯಥಾವತ್ತಾಗಿ ಅರಿಯುವುದು ಕಡು ಕಷ್ಟವಾಗಿರುತ್ತದೆ.

ಶ್ರೀವರ್ಮಾ ವಿದ್ವಾನ್ ಎಂ. ಎಸ್. ಗಂಗಾಧರರವರೂ ಅನೇಕ ಗ್ರಂಥಗಳಿಂದ ತಿಳಿದು ಬರುವ ಸಂಗತಿಗಳನ್ನೇಆರಿಸಿಕೊಂಡು ಮುದ್ದಾದ ಭಾಷೆಯಿಂದ ಈ ಗ್ರಂಥವನ್ನು ರಚಿಸಿ ಶ್ರೀಮದಾಚಾರ್ಯರ ಅನುಗ್ರಹಕ್ಕೆ ಪಾತ್ರರಾಗಿರುತ್ತಾರೆ. ಶ್ರೀಮದಾಚಾರ್ಯರ ವಿಷಯಗಳನ್ನು ತಿಳಿಯ ಬಯಸುವವರಿಗೆ ಈ ಗ್ರಂಥವು ಆಚಾರ್ಯರ ವಿಷಯದಲ್ಲಿ ಪೂಜ್ಯ ಬುದ್ಧಿಯನ್ನು ಹುಟ್ಟಿಸುವುದರಲ್ಲಿ ಎಳ್ಳಷ್ಟೂ ಸಂಶಯವಿರುವುದಿಲ್ಲ. ಕ್ರಮವಾಗಿ ಆಚಾರ್ಯರ ಭಾಷ್ಯಾದಿ ಗ್ರಂಥಗಳನ್ನೂ ಓದಿ ತತ್ವವನ್ನರಿತು ಕೃತಾರ್ಥರಾಗಲು ಅವಕಾಶವೂ ಉಂಟಾಗುತ್ತದೆ. ಈ ಗ್ರಂಥಕರ್ತರು ಕತೆಯನ್ನು ನಿರೂಪಿಸುವಾಗ ಅಲ್ಲಲ್ಲಿ ನೀತಿ ಧರ್ಮಗಳನ್ನು ಎತ್ತಿ ಹಿಡಿದಿರುತ್ತಾರೆ; ಇಷ್ಟೇ ಅಲ್ಲದೆ ಆಯಾಯಾ ಸಂದರ್ಭಾನುಸಾರವಾಗಿ ಸಿದ್ಧಾಂತ ಭಾಗವನ್ನೂ ಸಂಕ್ಷೇಪರೂಪವಾಗಿ ವಿವರಿಸಿರುತ್ತಾರೆ. ಭಾಷೆಯು ಬಹಳ ಸರಳ. ಇದರಿಂದ ಆಚಾರ್ಯರ ಮೇಲಿನ ಭಕ್ತಿಯ ಪ್ರಚಾರವು

ಚೆನ್ನಾಗಿ ಆಗುತ್ತದೆ. ಪ್ರತಿಮೆಗಳಲ್ಲಿ ಬ್ರಹ್ಮಪ್ರತಿಷ್ಠೆ ಮಾಡಿದರೂ ಅವು ಕಾಲ ಕ್ರಮದಲ್ಲಿ ಕಳೆಯನ್ನು ಕಳೆದುಕೊಂಡು ನಶಿಸಿಬಿಡುತ್ತದೆ. ಭಕ್ತರ ಹೃದಯ ದಲ್ಲಿ ಮಾಡಿದ ಬ್ರಹ್ಮಪ್ರತಿಷ್ಠೆಯು ಶಾಶ್ವತವಾಗಿ ನೆಲೆ ನಿಲ್ಲುತ್ತದೆ. ಪ್ರಕೃತ ಈ ಗ್ರಂಥವು ನಮ್ಮ ಜನಾಂಗಕ್ಕೆ ಇಂಥದ್ದೊಂದು ಮಹದುಪಕಾರವನ್ನು ಮಾಡಿರು ತ್ತದೆಯೆಂದು ದೃಢವಾಗಿ ನಂಬಿರುತ್ತೇನೆ. ನಮ್ಮ ಜನಾಂಗವು ಶ್ರೀಮದಾ ಚಾರ್ಯರ ಪೂರ್ಣ ವೈಭವವನ್ನು ಮನಗಾಣುವಂತೆ ಅನುಗ್ರಹಿಸಲೆಂದು ಭಗ ವಂತನನ್ನು ಪ್ರಾರ್ಥಿಸಿ ನನ್ನ ಈ ಮುನ್ನುಡಿಯನ್ನು ಮುಗಿಸುತ್ತೇನೆ.

'ಪಂಡಿತ ಪ್ರವರ' ನ್ಯಾಯ ಸಾಹಿತ್ಯ ವೇದಾಂತ ವಿದ್ವಾನ್
**ಹೊಸಕೆರೆ ಅನಂತಮೂರ್ತಿ ಶಾಸ್ತ್ರೀ**
ನ್ಯಾಯಶಾಸ್ತ್ರದ ಅಧ್ಯಾಪಕ
ಚಾಮರಾಜೇಂದ್ರ ಸಂಸ್ಕೃತ ಕಾಲೇಜು, ಬೆಂಗಳೂರು

10—8—1954

———

# ಪ್ರಸ್ತಾವನೆ

---

ದೇವರು ಒಬ್ಬನೇ. ಆದರೂ ಅವನಿಗೆ ಹಲವಾರು ರೂಪಗಳೂ ಹಲವಾರು ಹೆಸರುಗಳೂ ಉಂಟು. ಆತನು ಸರ್ವವ್ಯಾಪಿ. ಈ ಅಂಶವನ್ನು "ಸರ್ವಂ ಖಲ್ವಿದಂ ಬ್ರಹ್ಮ" ಮೊದಲಾದ ಉಪನಿಷದ್ವಾಕ್ಯಗಳೂ, "ಅಂತಾ ರಾಮಮಯಂ, ಈ ಜಗಮಂತಾ ರಾಮಮಯಂ" "ಎಲ್ಲಾ ರೂಪವು ತಾನಂತೆ, ಶಿವ ಎಲ್ಲೆಲ್ಲಿಯೂ ತುಂಬಿಹನಂತೆ"—ಇವೇ ಮುಂತಾದ ದಾಸವರೇಣ್ಯರ ಮಾತುಗಳೂ ಸಾರುತ್ತಿವೆ.

ಪರಮಾತ್ಮನು ಎಲ್ಲೆಡೆಯಲ್ಲಿಯೂ ಇರುವುದು ಸತ್ಯವಾದರೂ ನಾವು ಆತನನ್ನು ನೋಡಲಾರೆವು. ಆತನನ್ನು ನೋಡಲು ಜ್ಞಾನವೆಂಬ ದಿವ್ಯ ನೇತ್ರಗಳಿರಬೇಕು.

ಇದನ್ನು ಭಗವದ್ಗೀತೆಯಲ್ಲಿ ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಹೇಳಿದ್ದಾನೆ—"ನತುಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವ ಚಕ್ಷುಷಾ । ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯಮೇ ಯೋಗಮೈಶ್ವರಮ್॥ [ಅಧ್ಯಾಯ ೧೧, ಶ್ಲೋಕ ೮] ಇದನ್ನೇ ಶಿವಗೀತೆಯಲ್ಲಿ ಭಗವಾನ್ ಶಂಕರನು ಶ್ರೀರಾಮಚಂದ್ರನನ್ನು ಕುರಿತು ಬೇರೆ ಮಾತುಗಳಲ್ಲಿ ಹೇಳಿದ್ದಾನೆ—" ದಿವ್ಯಂ ಚಕ್ಷುಃ ಪ್ರದಾಸ್ಯಾಮಿ, ತುಭ್ಯಂ ದಶರಥಾತ್ಮಜ । ತೇನ ಪಶ್ಯ ಭಯಂತ್ಯಕ್ತ್ವಾ ಮತ್ತೇಜೋ ಮಂಡಲಂ ಧ್ರುವಂ ॥ ನ ಚರ್ಮ ಚಕ್ಷುಷಾ ದ್ರಷ್ಟುಂ ಶಕ್ಯತೇ ಮಾಮಕಂ ಮಹಃ [ಅಧ್ಯಾಯ ೭, ಶ್ಲೋ ೧೮-೧೨]

[ನನ್ನನ್ನು ಚರ್ಮದ ಕಣ್ಣುಗಳಿಂದ ನೋಡುವುದಕ್ಕೆ ಸಾಧ್ಯವಿಲ್ಲ. ನಿನಗೆ ದಿವ್ಯಚಕ್ಷುಸ್ಸನ್ನು ಕರುಣಿಸುತ್ತೇನೆ. ನನ್ನ ಈಶ್ವರೀ ಲೀಲೆಯನ್ನು, ಮಹತ್ತಾದ ತೇಜೋಮಂಡಲವನ್ನು ನೋಡು]

ಹೀಗಿರುವಾಗ, ವಸ್ತುವು ಬರಿಗಣ್ಣಿಗೆ ಕಾಣದ ಮಾತ್ರಕ್ಕೆ ಆ ವಸ್ತುವೇ ಇಲ್ಲವೆಂದು ಹೇಳುವುದಾದರೂ ಹೇಗೆ? ಗಾಳಿ ಕಣ್ಣಿಗೆ ಕಾಣಿಸುವುದಿಲ್ಲ. ಹಾಗಾದರೆ ಗಾಳಿಯ ಇರುವಿಕೆಯು ಸುಳ್ಳೇ? ಗಾಳಿಯನ್ನು ಅದರ ಕಾರ್ಯ

ಗಳಿಂದ ತಿಳಿಯಬಹುದು. ಹಾಗೆಯೇ ಸೃಷ್ಟಿಯ ವೈಚಿತ್ರ್ಯಗಳನ್ನು ಕಂಡು ಅದಕ್ಕೆ ಕಾರಣನಾದ ಪರಮಾತ್ಮನೆಂಬುವವನೊಬ್ಬನು ಇರಬೇಕೆಂದು ತಿಳಿಯಬೇಕು.

ಕಣ್ಣಿಗೆ ಕಾಣದ ಪರಮಾತ್ಮನ ಇರುವಿಕೆಯನ್ನು ಒಪ್ಪುವವರು ಆಸ್ತಿಕರೂ, ಒಪ್ಪದವರು ನಾಸ್ತಿಕರೂ ಆಗಿದ್ದಾರೆ. ಭೂಲೋಕದಲ್ಲಿ ನಾಸ್ತಿಕವಾದವು ಹೆಚ್ಚಿ ಅಧರ್ಮಕ್ಕೆ ಪ್ರಾಬಲ್ಯವುಂಟಾಗಲು ಧರ್ಮದ ಪುನರುದ್ಧಾರಕ್ಕಾಗಿ ಭಗವಾನ್ ಶಂಕರನು, ಶಂಕರನಾಗಿ ಅವತಾರ ಮಾಡಬೇಕಾಯಿತು.

'ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಾಂ ಸೃಜಾಮ್ಯಹಂ ॥

" ಯಾವಾಗ ಧರ್ಮಕ್ಕೆ ಹಾನಿಯುಂಟಾಗಿ, ಅಧರ್ಮವು ಹೆಚ್ಚುವುದೋ ಆಗ ನಾನು ಅವತಾರ ಮಾಡುತ್ತೇನೆ " ಎಂಬ ಗೀತಾವಾಕ್ಯಕ್ಕೆ ಅನುಸಾರವಾಗಿ ಶಂಕರರ ಅವತಾರ ಧರ್ಮದ ಉದ್ಧಾರಕ್ಕಾಗಿಯೇ ಆಯಿತು.

ಪರಮಾತ್ಮನು ನಿರ್ಗುಣನೂ, ನಿರಾಕಾರನೂ ಎಂದು ವೇದಗಳೇ ಸಾರುತ್ತಿವೆ. ಆದರೂ ರಜೋಗುಣದಿಂದ ಪ್ರಪಂಚದ ಸೃಷ್ಟಿಯನ್ನೂ, ಸತ್ವಗುಣದಿಂದ ಪರಿಪಾಲನೆಯನ್ನೂ ತಮೋಗುಣದಿಂದ ಲಯವನ್ನೂ ಮಾಡುತ್ತಾನೆ. ನಿರಾಕಾರನಾದರೂ ಮತ್ಸ್ಯ, ಕೂರ್ಮ, ವರಾಹಾದಿ ಅವತಾರಗಳಿಂದ ಸಾಕಾರನಾಗಿದ್ದಾನೆ.

ನಿರ್ಗುಣನಾದರೂ ಸಗುಣನಾಗಿ, ನಿರಾಕಾರನಾದರೂ ಸಾಕಾರನಾಗಿ, ತೋರುವುದು ಹೇಗೆ ಸಾಧ್ಯ ? ಎಂಬ ಸಂದೇಹ ತೋರಬಹುದು. ಆದರೆ ನಿಜವಾಗಿ ಅಂತಹ ಸಂದೇಹಕ್ಕೆ ಆಸ್ಪದವೇ ಇಲ್ಲ. ಹೇಗೆಂದರೆ :—

ಒಬ್ಬ ಐಂದ್ರಜಾಲಿಕನಾದವನೇ (ಕಣ್ಣು ಕಟ್ಟು ವಿದ್ಯೆಯನ್ನು ಬಲ್ಲ ಮಂತ್ರಗಾರ) ಎಷ್ಟೋ ಅದ್ಭುತ ಕಾರ್ಯಗಳನ್ನು ಮಾಡಿ ತೋರಿಸುತ್ತಾನೆ ; ಇಲ್ಲದವುಗಳನ್ನು ಇರುವಂತೆ ತೋರಿಸುತ್ತಾನೆ. ಹೀಗೆಂದ ಮೇಲೆ ಅಘಟನಾಘಟನ ಸಾಮರ್ಥ್ಯವುಳ್ಳ ಪರಮಾತ್ಮನಿಗೆ ಇದು ಅಸಾಧ್ಯವೆ ? ಅವನಿಗೆ ಯಾವುದೂ ಹೆಚ್ಚಲ್ಲ. ಪರಮಾತ್ಮನು ನಮ್ಮ ಹೃದಯದಲ್ಲಿ ಕಮಲದ ಎಲೆಯ ಮೇಲಿನ ನೀರು ಹೇಗೆ ಅಂಟಿಯೂ ಅಂಟದಿರುವುದೋ ಹಾಗೇ ಇರುವನು ; ಆದರೆ ನಮಗಾಗುವ ಸುಖ-ದುಃಖಗಳಿಂದ ಆತನು ದೂರವಿರುವನು.

ಪರಮಾತ್ಮನು ನಮ್ಮ ದೇಹದಲ್ಲಿರುವಾಗ ಅಜ್ಞಾನದಿಂದ ಆವೃತನಾಗಿ ಜೀವಾತ್ಮನೆನಿಸಿಕೊಳ್ಳುವನು. ~~ಇದೇ ಮುಕ್ತಿ~~ ದೇಹಕ್ಕೆ ನಾಶವೇ ಹೊರತು, ಆತ್ಮಕ್ಕೆ ಎಂದೆಂದಿಗೂ ನಾಶವಿಲ್ಲ. ಆತ್ಮನು ಪರಂಜ್ಯೋತಿಯಲ್ಲಿ ಐಕ್ಯನಾಗುತ್ತಾನೆ.

ಶಂಕರರ ವರಪ್ರಸಾದಕ್ಕೆ ಪಾತ್ರನಾದ ಆನಂದಗಿರಿಯು ಹೇಳಿದಂತೆ, ಘಟದೊಳಗಿನ ಆಕಾಶವು, ಹೊರಗಿನ ಆಕಾಶದಲ್ಲಿ ಸೇರಿಹೋಗುವ ರೀತಿಯಲ್ಲಿ, ದೇಹದಲ್ಲಿನ ಆತ್ಮ ಪರಮಾತ್ಮನಲ್ಲಿ ಐಕ್ಯವಾಗುವುದರಿಂದಲೇ ಸುಖ–ದುಃಖಗಳಿಂದ ಬಿಡುಗಡೆ ಹೊಂದಲು ಸಾಧ್ಯ. ಇದನ್ನೇ ಮುಕ್ತಿಯೆನ್ನುತ್ತಾರೆ. ಮುಕ್ತಿಯೆಂದರೆ, ‘ ದೇಹವೇ ನಾನು ’ ಎಂಬ ಮೋಹದ ನಾಶವಾಗುವಿಕೆ. ಮೋಹನಾಶವಾಗುವುದಕ್ಕೆ ಏಕೈಕ ಸಾಧನ ‘ ಜ್ಞಾನ ’. ಆ ಜ್ಞಾನವನ್ನು ಪಡೆಯುವುದಕ್ಕೆ ಚಿತ್ತಶುದ್ಧಿಯು ಅತ್ಯಾವಶ್ಯಕ. ಚಿತ್ತಶುದ್ಧಿಯು ಕರ್ಮಾನುಷ್ಠಾನದಿಂದ ಉಂಟಾಗುವುದು. ಚಿತ್ತಶುದ್ಧಿಗಾಗಿ ದೇವ ದೇವನನ್ನು ಯಾವ ರೂಪದಿಂದಲಾದರೂ ಭಜಿಸಬಹುದು—ಎಂಬ ಈ ತತ್ವವನ್ನು ಭಾರತದಲ್ಲಿ ಹರಡಿ, ಶಂಕರಾಚಾರ್ಯರು ಜನಗಳನ್ನು ಉದ್ಧರಿಸಿದ್ದಾರೆ.

ಇಂತಹ ಮಹಿಮೋಪೇತರಾದ, ಜಗದ್ಗುರುವೆನಿಸಿಕೊಂಡು ವಿಖ್ಯಾತರಾದ, ಪರಮಹಂಸ ಪರಿವ್ರಾಜಕಾಚಾರ್ಯ, ಶ್ರೀ ಮಚ್ಛಂಕರಭಗವತ್ಪಾದರ ಚರಿತ್ರೆಯು ಇಲ್ಲಿ ಗುರುಕೃಪೆಯಿಂದ ಸಂಗ್ರಹಿಸಲ್ಪಟ್ಟಿದೆ.

ಶ್ರೀಮಾನ್ ಜೆ. ಟಿ. ಶ್ರೀಕಂಠಯ್ಯನವರಿಗೆ ಆ ಸದ್ಗುರುವೇ ಪ್ರೇರೇಪಣೆ ಮಾಡಿ, ಶಂಕರ ವಿಜಯದಂತಹ ಪವಿತ್ರ ಗ್ರಂಥವನ್ನು ಸಂಗ್ರಹಿಸುವ ಈ ಕೆಲಸದಲ್ಲಿ ಅವರು ನನ್ನನ್ನು ನಿಯೋಜಿಸಿದುದು ನನ್ನ ಭಾಗ್ಯವೆಂದೇ ಭಾವಿಸುತ್ತೇನೆ.

ಈ ಕಾರ್ಯದಲ್ಲಿ ತುಂಬ ನೆರವಾದ ಚಿ|| ಎಂ. ಜಿ. ನಾಗರಾಜರಾವ್, ಬಿ ಎಸ್‌ಸಿ., ಮತ್ತು ಹಸ್ತಪ್ರತಿಯನ್ನು ತಿದ್ದಿಕೊಟ್ಟ, ಕತೆಗಾರ ಪತ್ರಿಕೆಯ ಸಂಪಾದಕರೂ, ‘ ಆಸೇತು ಹಿಮಾಚಲ ಯಾತ್ರೆ ’ ಮೊದಲಾದ ಗ್ರಂಥಗಳ ಕರ್ತೃಗಳೂ ಆದ ಶ್ರೀಮಾನ್ ಜಿ. ಎ. ನರಸಿಂಹಮೂರ್ತಿ, ಬಿ. ಎಸ್‌ಸಿ., ಅವರಿಗೂ ನನ್ನ ಕೃತಜ್ಞತೆಗಳು. ಅಲ್ಲದೆ ಈ ವಿಷಯ ಸಂಗ್ರಹಣೆಯಲ್ಲಿ ಉಪಯೋಗಿಸಲ್ಪಟ್ಟ ಗ್ರಂಥಗಳಿಗೂ ಮತ್ತು ಅವುಗಳ ಗ್ರಂಥಕರ್ತರುಗಳಿಗೂ ನಾನು ಋಣಿಯಾಗಿದ್ದೇನೆ.

ಈ ಗ್ರಂಥವನ್ನು ಅಮೂಲಾಗ್ರವಾಗಿ ಓದಿ, ತಮ್ಮ ಅಭಿಪ್ರಾಯವನ್ನು ಮುನ್ನುಡಿ ರೂಪದಲ್ಲಿ ಬರೆದು ಕೊಟ್ಟು, ಈ ಗ್ರಂಥ-ದೇವಾಲಯಕ್ಕೆ ಕಳಸವನ್ನೇರಿಸಿದ, 'ಪಂಡಿತಪ್ರವರ' ನ್ಯಾಯ ಸಾಹಿತ್ಯ ವೇದಾಂತ ವಿದ್ವಾನ್ ಇತ್ಯಾದಿ ಬಿರುದಾಂಕಿತರಾದ ವಿದ್ವಾನ್ ಹೊಸಕೆರೆ ಅನಂತಮೂರ್ತಿಶಾಸ್ತ್ರಿಗಳವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುವುದು ನನ್ನ ಆದ್ಯ ಕರ್ತವ್ಯವಾಗಿದೆ.

ಪ್ರಿಯ ಓದುಗರೇ ! ಈ ಪುಟ್ಟ ಪುಸ್ತಕದಲ್ಲಿ ಏನಾದರೂ ಗುಣಗಳು ಬಂದಲ್ಲಿ, ಅವು ಗುರುಕೃಪೆಯಿಂದ ಆದುವೆಂತಲೂ, ಇರುವ ದೋಷಗಳು ನನ್ನವೆಂತಲೂ ತಿಳಿದು, ಆ ದೋಷಗಳನ್ನು ತಿಳಿಸಿದಲ್ಲಿ, ಅವುಗಳನ್ನು ತಿದ್ದಿಕೊಳ್ಳಲು, ನಾನು ಸದಾ ಸಿದ್ಧನಿರುತ್ತೇನೆ. ಈ ಸಂಗ್ರಹವನ್ನು ಓದುವುದರಿಂದ, ಅಥವ ಕೇಳುವುದರಿಂದ ಓದುಗರಿಗೆ ಸ್ವಲ್ಪವಾದರೂ ಮನೋವಿಕಾಸವುಂಟಾಗಿ ಆಸ್ತಿಕತೆಯಲ್ಲಿ ಮನಸ್ಸುಂಟಾದರೆ ನಾನು ಕೃತಕೃತ್ಯನಾದಂತೆಯೇ ಸರಿ !

ಶ್ರೀ ಸಿದ್ಧರಮಣ ಯೋಗಾಶ್ರಮ
ಮಲ್ಲೇಶ್ವರಂ, ಬೆಂಗಳೂರು. ೩

ಇತಿ ಸದ್ಗುರು ಪಾದಸೇವಕ,
**ಎಂ. ಎಸ್. ಗಂಗಾಧರನ್**

———

# ಪ್ರಕಾಶಕರ ನುಡಿ

———

ಔದುಂಬರಃ ಕಲ್ಪವೃಕ್ಷಃ | ಕಾಮಧೇನೂಶ್ಚ ಸಂಗಮಃ ||
ಚಿಂತಾಮಣಿ ಗುರೋರ್ಪಾದಂ | ದುರ್ಲಭೇ ಭುವನತ್ರಯಂ ||

ಶ್ರೀ ಗುರುಪಾದವೆಂಬುದು ಚಿಂತಾಮಣಿಯಂತೆ ಇಷ್ಟಫಲಗಳನ್ನೆಲ್ಲಾ ಕೊಡುವಂತಹುದು. ಕಬ್ಬಿಣವನ್ನು ಚಿನ್ನವಾಗಿಸಬಲ್ಲ ಶಕ್ತಿ ಈ 'ಚಿಂತಾಮಣಿ' ಯದು. ಮೂಕನಾದ ಮಗುವನ್ನು "ಹಸ್ತಾಮಲಕ" ರನ್ನಾಗಿಯೂ, ಗಗ್ಗನೆಂದು ತಿರಸ್ಕೃತನಾದ ಆನಂದಗಿರಿಯನ್ನು "ತೋಟಕಾಚಾರ್ಯ" ರನ್ನಾಗಿಯೂ ಮಾಡಿದ ಮಹಾಶಕ್ತಿ ಈ "ಚಿಂತಾಮಣಿ" ಯದು. ಇಂಥಾ "ಚಿಂತಾಮಣಿ" ಯ ಆಶ್ರಯುವನ್ನು ಬಿಟ್ಟು ಬೇರೆ ಅಲ್ಪ ಶಕ್ತಿಗಳಿಗೆ ಶರಣು ಹೋಗುವವರು ಎಂಥಾ ನಿರ್ಭಾಗ್ಯರು!

ನಮ್ಮ ಓದುಗರಲ್ಲಿ ಶ್ರೀ ಗುರುಭಕ್ತಿ ವೃದ್ಧಿಯಾಗಲೆಂದು ಆಶಿಸಿ, ಗುರು ಚರಿತಾಮೃತ ಸಂಗ್ರಹವನ್ನು "ಶ್ರೀ ಸದ್ಗುರು ಕಥಾ" ಎಂಬ ಹೆಸರಿನ ಪುಟ್ಟ ಪುಸ್ತಕವಾಗಿ ಪ್ರಕಟಿಸಿದೆವು. ಬೆಲೆಯೂ ಸುಲಭವಾಗಿತ್ತು. ಅಲ್ಪ ಕಾಲಾವಧಿಯಲ್ಲೇ ಎರಡು ಮುದ್ರಣದ ಅನೇಕ ಸಾವಿರ ಪ್ರತಿಗಳು ಮಾರಾಟ ವಾದುವು. ಅದ್ವೈತ ತತ್ವವನ್ನು ಪುನಃ ಪ್ರತಿಷ್ಠಾಪಿಸಿದ ಆದಿಗುರು ಶ್ರೀ ಶಂಕರಾಚಾರ್ಯರ ಚರಿತ್ರೆಯನ್ನು ಸರಳವಾಗಿ, ಸುಲಭ ಬೆಲೆಯಲ್ಲಿ ಪ್ರಕಟಿಸ ಬೇಕೆಂಬ ಹಂಬಲು ಬಹು ದಿನಗಳಿಂದ ಇತ್ತು. ಅದು ಈ ಗ್ರಂಥದಿಂದ ಪೂರ್ಣವಾಯಿತು.

ಈ ಪುಸ್ತಕವನ್ನು ಬರೆದ ಗುರುಬಂಧು ಶ್ರೀ ವಿದ್ವಾನ್ ಎಂ. ಎಸ್. ಗಂಗಾಧರನ್ ಅವರು ಅಧ್ಯಾಪಕರು. ಅನೇಕ ಶಿಷ್ಯರಿಗೆ ಈವರೆವಿಗೆ ಅಮೂಲ್ಯ ವಿದ್ಯಾದಾನ ಮಾಡಿದ ಪುಣ್ಯಶಾಲಿಗಳು. ಜೀವನದಲ್ಲಿ ಸರಳರೂ, ಶಾಂತಿ ಪ್ರಿಯರೂ, ಆಸ್ತಿಕರೂ ಆದ ಈ ಮಹನೀಯರು ಪವಿತ್ರವಾದ "ಶ್ರೀ ಶಂಕರ ವಿಜಯ" ವನ್ನು ಬರೆದುದು ಕನ್ನಡ ಜನತೆಯ ಭಾಗ್ಯ.

ಶಕ್ತಿಯುತವಾದ ಬೀಜವು ಸತ್ವಮಯವಾದ ಕ್ಷೇತ್ರದಲ್ಲಿ ಮೊಳೆತು, ಚಿಗಿತು, ಲೋಕೋತ್ತರವಾದ ವೃಕ್ಷವಾಗುವುದು. ಅದೇ ಬೀಜವು ಕ್ಷೇತ್ರ ದೋಷದಿಂದ ಸುಟ್ಟು ಮಣ್ಣಾಗುವುದೂ ಉಂಟು. ಹೀಗೆ ಈ ಗ್ರಂಥದ ಕರ್ತೃಗಳ ಜೀವನ, ಆಚಾರ ಮತ್ತು ವಿಚಾರಗಳ ಪರಿಶುದ್ಧತೆಯಿಂದ ಮಹತ್ತರವಾದ ಕ್ಷೇತ್ರದಲ್ಲಿ ಭವ್ಯವಾದ ಈ ಚರಿತ್ರಾವೃಕ್ಷ ಬೆಳೆದಿದೆ. ಇದರ ಪರಿಮಳ ಓದುಗರ ಹೃದಯದಲ್ಲಿ ಶಾಶ್ವತವಾದ, ಶ್ರೇಯೋದಾಯಕವಾದ ಪರಿಣಾಮವನ್ನು ಉಂಟು ಮಾಡುವುದೆಂದು ದೃಢವಾಗಿ ನಂಬುವೆವು.

ಸರಳ ಸ್ವಭಾವಿಗಳಾದ ಶ್ರೀ ಗಂಗಾಧರನ್ ಅವರು ನಮ್ಮ ಮೇಲಿನ ಅಭಿಮಾನದಿಂದ, ನಾವು ಕೇಳಿದೊಡನೆ ವಿಶೇಷ ಶ್ರಮವಹಿಸಿ, ಈ ಗ್ರಂಥವನ್ನು ಬರೆದರು. ಈ ಉಪಕಾರಕ್ಕಾಗಿ ಅವರಿಗೆ ನಾವು ಚಿರಕೃತಜ್ಞರು. ಭಗವಂತನು ಅವರಿಗೆ ಆಯುಸ್ಸು ಮತ್ತು ಆರೋಗ್ಯಾದಿ ಭಾಗ್ಯಗಳನ್ನು ಕೊಟ್ಟು ಅವರಿಂದ ಇಂಥಾ ಸೇವೆ ಅನಂತವಾಗಿ ನಡೆಯುವಂತೆ ಪ್ರೇರೇಪಿಸಲೆಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥ ಅಚ್ಚಾಗುವುದರಲ್ಲಿ ವಿಶೇಷ ಶ್ರಮವಹಿಸಿ, ಅತ್ಯಲ್ಪ ಕಾಲದಲ್ಲಿ ಅಂದವಾಗಿ ಮುದ್ರಿಸಲು ಸಹಾಯಕರಾದ "ಬಾಲಬಂಧು" ಸಂಪಾದಕ ಚಿ|| ಎನ್. ಡಿ. ರಾಮಮೂರ್ತಿ ಅವರಿಗೆ ಸದ್ಗುರುವು ಆಶೀರ್ವದಿಸಲೆಂದು ಹಾರೈಸುವೆವು.

ಓದುಗರ ಪ್ರೋತ್ಸಾಹ ಎಂದಿಗಿಂತ ಹೆಚ್ಚು ಹೆಚ್ಚಾಗಿ ದೊರೆತರೆ ವಿಭೂತಿ ಪುರುಷರಾದ ಶ್ರೀ ರಾಮಾನುಜಾಚಾರ್ಯ, ಶ್ರೀಮನ್ಮಧ್ವಾಚಾರ್ಯ, ಕಲ್ಯಾಣದ ಶ್ರೀ ಬಸವೇಶ್ವರರ ಚರಿತ್ರೆಗಳನ್ನು ಪ್ರಕಟಿಸಲು ಪ್ರಯತ್ನಿಸುವೆವು.

ಇತಿ

10—12—1954

**ಜೆ. ಟಿ. ಶ್ರೀಕಂಠಯ್ಯ**
ಆರ್. ಎಸ್. ನ್ಯೂಸ್ ಏಜೆನ್ಸಿ

———

28

# ಸ ಮ ರ್ಪ ಣೆ

ಆಸ್ತಿಕ ಶಿರೋಮಣಿಗಳೂ, ಧರ್ಮ ಗ್ರಂಥಗಳನ್ನು ಪ್ರಕಟಿಸುವುದರಲ್ಲಿ ಆಸಕ್ತಿಯುಳ್ಳವರೂ, ಆಸೇತು ಹಿಮಾಚಲ ಯಾತ್ರೆಯನ್ನು ಪೂರ್ಣಗೊಳಿಸಿದ ಪುಣ್ಯಶಾಲಿಗಳೂ ಮತ್ತು ನನ್ನ ಹಿತೈಷಿಗಳೂ ಆದ

**ಶ್ರೀಮಾನ್ ಜೆ. ಟಿ. ಶ್ರೀಕಂಠಯ್ಯ**

ಇವರಿಗೆ ಈ ಪುಟ್ಟ ಪುಸ್ತಕವನ್ನು ಭಕ್ತಿ ಕಾಣಿಕೆಯಾಗಿ ಅರ್ಪಿಸಿರುತ್ತೇನೆ.




ಶ್ರೀ ಶಂಕರರು ಶಿಷ್ಯರೊಂದಿಗೆ



॥ ಶ್ರೀ ಸದ್ಗುರು ಪರಬ್ರಹ್ಮಣೇ ನಮಃ ॥

॥ ಹರಿಃ ಓಂ ॥

28



# ಶ್ರೀ ಶಂಕರ ವಿಜಯ

ವಕ್ರತುಂಡ ಮಹಾಕಾಯ, ಕೋಟಿ ಸೂರ್ಯ ಸಮಪ್ರಭ ।
ಅವಿಘ್ನಂ ಕುರು ಮೇ ದೇವ, ಸರ್ವ ಕಾರ್ಯೇಷು ಸರ್ವದಾ ॥ ೧ ॥

ಶ್ರೀ ಶಾರದಾಂ ಶಾರದ ಚಂದ್ರವಕ್ತ್ರಾಂ ಶುಚಿಸ್ಮಿತಾಂ ಮಂಜುಲ
ವಾಗ್ವಿಲಾಸಾಂ ವೀಣಾಕ್ಷಮಾಲಾದಿ ವಿರಾಜಮಾನಾಂ ಚಿದ್ರೂಪಿಣೀಂ
ಸಂತತಮಾನತೋಽಸ್ಮಿ ॥ ೨ ॥

ಗುರುಬ್ರಹ್ಮಾ ಗುರುರ್ವಿಷ್ಣು ಗುರುರೇವ ಮಹೇಶ್ವರಃ ।
ಗುರು ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ । ॥ ೩ ॥

ಶಂಕರಂ ಶಂಕರಾಚಾರ್ಯಂ ಕೇಶವಂ ಬಾದರಾಯಣಂ ।
ಸೂತ್ರ ಭಾಷ್ಯಕೃತೌ ವಂದೇ ಭಗವಂತೌ ಪುನಃ ಪುನಃ ॥ ೪ ॥

## ಪ್ರಕರಣ ೧

### ಶಂಕರಾವತಾರಕ್ಕೆ ಮೊದಲು

ನೈಮಿಶಾರಣ್ಯದಲ್ಲಿ ಶೌನಕಾದಿ ಮುನಿಗಳು ತಪಸ್ಸನ್ನು ಮಾಡುತ್ತಾ ಕಾಲಕಳೆಯುತ್ತಿದ್ದರು. ಹೀಗಿರುವಾಗ ಒಂದು ದಿನ ಸೂತರೆಂಬ ಮುನಿಶ್ರೇಷ್ಠರು ಅಲ್ಲಿಗೆ ಬಂದರು. ಆ ಋಷಿಗಳು ಬಂದು

ಮುನಿವರ್ಯರಿಗೆ ನಮಸ್ಕರಿಸಿ ಉಪಚರಿಸಿದರು. ಪರಸ್ಪರ ಕ್ಷೇಮ ಸಮಾಚಾರವನ್ನು ತಿಳಿದನಂತರದಲ್ಲಿ ಶೌನಕ ಮಹರ್ಷಿಯು ಸೂತರನ್ನು ಕುರಿತು ಈರೀತಿ ಪ್ರಶ್ನಿಸಿದನು :—

"ಮಹಾಮಹಿಮರೇ! 'ಶಿವನು ಕಲಿಯುಗದ ಮೊದಲು ೨೦೦೦ ವರ್ಷಗಳು ಕಳೆದ ನಂತರ ಭೂಲೋಕದಲ್ಲಿ ಹುಟ್ಟುವನು. ವೇದಕ್ಕೆ ವಿರೋಧವಾದ ಮತ್ತು ದೇವರೇ ಇಲ್ಲವೆಂದು ಹೇಳುವ ನಾಸ್ತಿಕ ಮತ ಗಳನ್ನು ಖಂಡಿಸುವನು. ಜೀವಾತ್ಮ, ಪರಮಾತ್ಮ ಎಂಬುದಾಗಿ ಎರಡಿಲ್ಲ ವೆಂದು ತಿಳಿಸುವ ಅದ್ವೈತಮತವನ್ನು ಸ್ಥಾಪಿಸುವನು.' ಎಂಬ ವಿಚಾರ ವನ್ನು ಶಿವರಹಸ್ಯವೆಂಬ ಪುರಾಣದಲ್ಲಿ ಕೇಳಿದ್ದೇವೆ. ಈಶ್ವರನು ಭೂಲೋಕದಲ್ಲಿ ಅವತರಿಸಿದ ಬಗೆಯೆಂತು? ಎಲ್ಲರಿಗೂ 'ತಂದೆ-ತಾಯಿ' ಆದ ಅವನ ಮಾತಾಪಿತೃಗಳಾರು? ಶಂಕರನು ಅದ್ವೈತ ಮತವನ್ನು ಹರಡಿದ ಬಗೆ ಯಾವುದು? ಅವರ ಜೀವನಕಾಲದಲ್ಲಿ ನಡೆದ ಚರಿತ್ರೆಗಳೇನು? ಇವೆಲ್ಲವನ್ನೂ ನೀವು ನಮಗೆ ವಿಶದವಾಗಿ ತಿಳಿಸಬೇಕು."

ಹೀಗೆ ಪ್ರಾರ್ಥಿಸಲ್ಪಟ್ಟ ಸೂತಮಹರ್ಷಿಯು ಪರಶಿವನನ್ನು ಧ್ಯಾನಿಸಿ ಶಂಕರರ ಚರಿತ್ರೆಯನ್ನು ಈ ರೀತಿ ಹೇಳಲುಪಕ್ರಮಿಸಿದರು:—

ಈಶ್ವರನು ಇಂದ್ರಾದಿ ದೇವತೆಗಳಿಂದ ಸೇವಿಸಲ್ಪಡುತ್ತಾ, ಭಕ್ತಾದಿಗಳ ಇಷ್ಟಾರ್ಥಗಳನ್ನು ನೆರವೇರಿಸುತ್ತಾ, ಪಾರ್ವತೀ ರಮಣ ನಾಗಿ ಕೈಲಾಸದಲ್ಲಿ ಮೆರೆಯುತ್ತಿರಲು ಭೂಲೋಕದಲ್ಲಿ ಕಲಿಯುಗವು ಪ್ರಾಪ್ತವಾಯಿತು. ಕಲಿಯುಗದ ಮಹಿಮೆಯನ್ನು ಏನೆಂದು ಹೇಳು ವುದು! ಬೇರೆ ಯುಗಗಳಲ್ಲಿ ಯಾವ ಪರಮಾತ್ಮನನ್ನು ಯಾಗ, ಧ್ಯಾನ, ಜಪತಪಾದಿಗಳಿಂದ ಒಲಿಸಿಕೊಳ್ಳಬೇಕೋ, ಆ ದೇವದೇವನನ್ನು ಕಲಿ ಯುಗದಲ್ಲಿ ಸ್ಮರಣೆ ಮಾತ್ರದಿಂದಲೇ ಒಲಿಸಿಕೊಳ್ಳಬಹುದು. ಹೀಗಿದ್ದರೂ ಕಲಿಪ್ರಾಬಲ್ಯದಿಂದ ಜನರು ಅದನ್ನೂ ಸಹ ಮಾಡಲಿಷ್ಟಪಡುವುದಿಲ್ಲ.

788 ರಲ್ಲಿ ಕೇರಳದ ಕಾಲಡಿಯಲ್ಲಿ ಜನನ.



ಕಲಿಯುಗದ ಆದಿಭಾಗದಲ್ಲಿ ಚಾರ್ವಾಕನೆಂಬುವನು ಯಜ್ಞಯಾಗಗಳಲ್ಲಿ ಕೊಡುತ್ತಿದ್ದ ಪಶುಬಲಿಯನ್ನೇ ಮುಖ್ಯವಾಗಿಟ್ಟುಕೊಂಡು ಹಿಂಸಾತ್ಮಕವಾದ ಒಂದು ಮತವನ್ನು ಬೋಧಿಸುತ್ತಾ ಬಂದನು. ಆ ಮತಕ್ಕೆ ಚಾರ್ವಾಕ ಮತವೆಂದೇ ಹೆಸರು. "ಅಹಿಂಸಾ ತತ್ವವನ್ನು ಅನುಸರಿಸುವುದಕ್ಕಾಗಿ ನಮಗೆ ನಾವೇ ತೊಂದರೆಯನ್ನು ತಂದೊಡ್ಡಿಕೊಳ್ಳಬಾರದು. ಮುಕ್ತಿ ಎಂದರೆ ಬೇರಾವುದೂ ಅಲ್ಲ. ಅನ್ಯರಿಗೆ ಅಧೀನರಾಗಿಲ್ಲದಿರುವುದೇ ಮುಕ್ತಿಯು."

ಭಸ್ಮೀ ಭೂತಸ್ಯದೇಹಸ್ಯ ಪುನರಾಗಮನಂ ಕುತಃ ।
ತಸ್ಮಾತ್ ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂಪಿಬೇತ್ ॥

"ಈ ದೇಹವನ್ನು ತ್ಯಜಿಸಿದನಂತರ ಪುನರ್ಜನ್ಮವೆಂಬುದು ಶುದ್ಧ ಸುಳ್ಳು. ಸುಟ್ಟುಹೋದ ದೇಹವು ಮತ್ತೆ ಹುಟ್ಟಿಬರುವುದು ಹೇಗೆ ಸಾಧ್ಯ? ಸತ್ತವರು ಮತ್ತೆ ಹುಟ್ಟುವುದಿಲ್ಲ. ಆದುದರಿಂದ ಸಾಲವನ್ನು ಮಾಡಿಯಾದರೂ ತುಪ್ಪವನ್ನು ಕುಡಿಯಬೇಕು" ಎಂಬುದಾಗಿ ಆತನು ಬೋಧಿಸತೊಡಗಿದನು. ಜನಗಳ ಮನಸ್ಸಿಗೆ ಇದು ಬಹಳವಾಗಿ ಹಿಡಿಸಿತು. ಹೀಗೆ ಎಲ್ಲರೂ ಈ ಮತವನ್ನು ಅನುಸರಿಸಿದರು. ಚಾರ್ವಾಕ ಮತವು ಹರಡಿತು. ಇದರಿಂದ ಜನರಲ್ಲಿ ಪ್ರಾಣಿಹಿಂಸೆ ಹೆಚ್ಚಿತು. ದೇವರಲ್ಲಿ ನಂಬಿಕೆ ಕಡಿಮೆಯಾಯಿತು. ಕೊನೆಗೆ ದೇವರೇ ಇಲ್ಲವೆಂದು ಹೇಳುವಂತಾಯಿತು. ಅಧರ್ಮ ಬೆಳೆಯಿತು. ಆಗ ವಿಷ್ಣುವು ಬೌದ್ಧಾವತಾರ ಮಾಡಿ ಅಹಿಂಸಾ ತತ್ವವನ್ನು ಬೋಧಿಸಿದನು. ಇದರ ಪರಿಣಾಮವಾಗಿ ಕ್ರೂರ ಕರ್ಮಗಳು ನಿಂತರೂ ವೇದ ಧರ್ಮಕ್ಕೆ ಉಂಟಾಗಿದ್ದ ಕೊರತೆಯು ತಪ್ಪಲಿಲ್ಲ. ಜನರು ವೇದಗಳಿಗೆ ಅಪಾರ್ಥಗಳನ್ನು ಕಲ್ಪಿಸಿದರು. ಯುಕ್ತಿವಾದವೂ ಹೆಚ್ಚಿತು. ಯಜ್ಞಯಾಗಾದಿಗಳು ನಿಂತು ಹೋಗಿ ದೇವತೆಗಳಿಗೆ ಆಹಾರವೇ ಇಲ್ಲದಂತಾಯಿತು.

ಈ ರೀತಿ ಭೂಲೋಕದಲ್ಲಿ ನಾಸ್ತಿಕವಾದವು ಹೆಚ್ಚಲು ಇಂದ್ರನು ಬ್ರಹ್ಮನಲ್ಲಿಗೆ ಹೋಗಿ ಮೊರೆಯಿಟ್ಟನು. ಬ್ರಹ್ಮನು ಇಂದ್ರಾದಿ ದೇವತೆಗಳೊಂದಿಗೆ ಈಶ್ವರನಲ್ಲಿಗೆ ಬಂದು ಆತನನ್ನು ವಿಧವಿಧವಾಗಿ ಸ್ತುತಿಸಿದನು. "ಭೂಲೋಕದಲ್ಲಿ ನಾಸ್ತಿಕವಾದವು ಹೆಚ್ಚಿದೆ. ಬ್ರಾಹ್ಮಣರು ವೇದಕರ್ಮವನ್ನು ಬಿಟ್ಟಿದ್ದಾರೆ. ಯಜ್ಞಯಾಗಾದಿಗಳು ನಿಂತು ಹೋಗಿವೆ. ವೇದಧರ್ಮಕ್ಕೆ ಒದಗಿರುವ ಹಾನಿಯನ್ನು ತಪ್ಪಿಸಿ ಅದನ್ನು ಉದ್ಧಾರ ಮಾಡಬೇಕು" ಎಂದು ಎಲ್ಲರೂ ಏಕಕಂಠದಿಂದ ನೀಲಕಂಠನನ್ನು ಬೇಡಿಕೊಂಡರು.

ಈಶ್ವರನು ಬ್ರಹ್ಮಾದಿಗಳ ಮೊರೆಯನ್ನು ಕೇಳಿ "ದೇವತೆಗಳಿರಾ! ಹೆದರಬೇಡಿ. ನಾನೇ ಭೂಲೋಕದಲ್ಲಿ ಅವತರಿಸಿ ನಾಸ್ತಿಕರನ್ನು ಖಂಡಿಸುತ್ತೇನೆ. ಧರ್ಮವನ್ನು ರಕ್ಷಿಸಿ, ವೇದವನ್ನು ಉದ್ಧರಿಸುತ್ತೇನೆ. ನೀವುಗಳೂ ನಿಮ್ಮ ಅಂಶದಿಂದ ಭೂಲೋಕದಲ್ಲಿ ಅವತರಿಸಿ, ವೇದದ ಕರ್ಮಾದಿ ಕಾಂಡಗಳನ್ನು ಉದ್ಧರಿಸಿರಿ. ನಾನು ಜ್ಞಾನಕಾಂಡವನ್ನು ಪ್ರಚಾರ ಮಾಡುತ್ತೇನೆ." ಎಂದು ಅಭಯವಿತ್ತು ಅವರನ್ನು ಕಳುಹಿಸಿಕೊಟ್ಟನು.

ಅನಂತರದಲ್ಲಿ ಶಿವನು ತನ್ನ ಮಗನಾದ ಷಣ್ಮುಖ ಸ್ವಾಮಿಯನ್ನು ಕರೆದು "ಎಲೈ, ಕುಮಾರನೇ! ವಿಷ್ಣುವು ಸಂಕರ್ಷಣನೆಂಬ ಹೆಸರಿನಿಂದ ವೇದದ ಉಪಾಸನಾ ಭಾಗವನ್ನು ಪುನರುದ್ಧಾರಗೊಳಿಸುತ್ತಾನೆ. ಆದಿಶೇಷನು ಪತಂಜಲಿಯೆಂಬ ಹೆಸರಿಂದ ಭೂಲೋಕದಲ್ಲಿ ಅವತರಿಸುತ್ತಾನೆ. ನೀನೂ ಸಹ ಕುಮಾರಿಲಭಟ್ಟನೆಂಬ ಹೆಸರಿನಿಂದ ಹುಟ್ಟಿ ಕರ್ಮಕಾಂಡವನ್ನು ಬೋಧಿಸು. ಬ್ರಹ್ಮನು ಮಂಡನಮಿಶ್ರನೆಂಬಭಿದಾನದಿಂದ ಹುಟ್ಟಿ ನಿನ್ನ ಸಹಾಯಕ್ಕೆ ಕಾದಿರುತ್ತಾನೆ. ಇಂದ್ರನು ಸುಧನ್ವ ರಾಜನಾಗಿ ಜನ್ಮತಾಳಿ ನಿನಗೆ ನೆರವಾಗುತ್ತಾನೆ." ಎಂದು ಹೇಳಲು ಷಣ್ಮುಖ

ಸ್ವಾಮಿಯು ಅತ್ಯಾನಂದದಿಂದ ತಂದೆಗೆ ನಮಸ್ಕರಿಸಿ ತನ್ನ ಕರ್ತವ್ಯವನ್ನು ಪಾಲಿಸಲು ಹೊರಟನು.

## ಪ್ರಕರಣ ೨

## ಶಂಕರರ ಜನನ

ಸೂತಮುನಿಗಳು ಮುಂದಿನ ಕತೆಯನ್ನು ಹೀಗೆ ತಿಳಿಸಿದರು:—

ಭಾರತದ ದಕ್ಷಿಣದಲ್ಲಿ ಕೇರಳವೆಂಬ ರಾಷ್ಟ್ರವೊಂದುಂಟು. ಅದನ್ನು ರಾಜಶೇಖರನೆಂಬ ರಾಜನು ಆಳುತ್ತಿದ್ದನು. ಆ ಕೇರಳದ ಸುತ್ತಲೂ ಪೂರ್ಣಾನದಿಯು ಹರಿಯುತ್ತದೆ. ಈ ನದಿಗೆ ಸಮೀಪದಲ್ಲಿಯೇ ವೃಷಭಾಚಲವೆಂಬ ಪರ್ವತವಿದೆ. ಆ ಪರ್ವತ ಶಿಖರದಲ್ಲಿ ಒಂದು ಶಿವಾಲಯವಿದೆ. ಇದರ ತಪ್ಪಲಲ್ಲಿ ಕಾಲಟಿಯೆಂಬ ಬ್ರಾಹ್ಮಣರ ಒಂದು ಅಗ್ರಹಾರವಿದೆ.

ಅಲ್ಲಿ ಕರ್ಮನಿಷ್ಠನಾಗಿ ಸದ್ಧರ್ಮದಿಂದ ವರ್ತಿಸುತ್ತಿದ್ದ ವಿದ್ಯಾಧಿರಾಜನೆಂಬ ಒಬ್ಬ ಬ್ರಾಹ್ಮಣನಿದ್ದನು. ದೈವಾನುಗ್ರಹದಿಂದ ಅವನಿಗೆ ಶಿವಗುರು ಎಂಬ ಮಗನಾದನು. ಆ ಶಿವಗುರುವಿನ ಮದುವೆಯು ಆರ್ಯಾಂಬೆಯೆಂಬ ಸತ್ಕುಲ ಪ್ರಸೂತೆಯೊಡನೆ ಆಯಿತು. ಶಿವಗುರುವು ಅತಿಥಿಸೇವಾ ನಿರತನಾಗಿ ಗೃಹಸ್ಥಾಶ್ರಮ ಧರ್ಮವನ್ನು ಪಾಲಿಸುತ್ತಿದ್ದನು. ಮಹಾಪತಿವ್ರತೆಯಾದ ಆರ್ಯಾಂಬೆಯು ಆತನಿಗೆ ಎಲ್ಲ ವಿಧದಲ್ಲಿಯೂ ಅನುಕೂಲಳಾಗಿದ್ದಳು.

ಆ ದಂಪತಿಗಳಿಗೆ ಮಕ್ಕಳಿಲ್ಲವೆಂಬ ಒಂದು ಕೊರತೆ ಹೊರತು ಮತ್ತಾವ ಚಿಂತೆಯೂ ಇರಲಿಲ್ಲ. ಈಶ್ವರನು ಸುಲಭವಾಗಿ ಪ್ರೀತನಾಗುವನೆಂದು ಶಿವಗುರುವಿಗೆ ಗೊತ್ತು. ಆತನನ್ನು ಆರಾಧಿಸುವುದಾಗಿ ಯೋಚಿಸಿ, ಶಿವಗುರು ತನ್ನ ಪತ್ನಿಯೊಂದಿಗೆ ವೃಷಭಾಚಲಕ್ಕೆ ಬಂದನು.

ಅಲ್ಲಿ ತನ್ನ ಮನೆ ದೇವರಾದ ಈಶ್ವರನನ್ನು ಶ್ರದ್ಧಾ ಭಕ್ತಿಗಳಿಂದ ಸೇವಿಸುತ್ತಿದ್ದನು.

ಈ ದಂಪತಿಗಳ ನಿಶ್ಚಲ ಸೇವೆಗೆ ತುಷ್ಟನಾದ ಪರಮೇಶ್ವರನು ಭಕ್ತರ ಮನೋಭಿಲಾಷೆಯನ್ನು ನೆರವೇರಿಸಲು ಸಂಕಲ್ಪಮಾಡಿದನು. ಒಂದು ದಿನ ಶಿವಗುರುವಿನ ಕನಸಿನಲ್ಲಿ ಈಶ್ವರನು ಬ್ರಾಹ್ಮಣ ರೂಪದಿಂದ ಕಾಣಿಸಿಕೊಂಡನು. ಶಿವಗುರುವು ಆ ಬ್ರಾಹ್ಮಣನಿಗೆ ನಮಸ್ಕರಿಸಿ ಭಕ್ತಿ ಭಾವದಿಂದ ನಿಂತಿರಲು ಬ್ರಾಹ್ಮಣ ರೂಪಿಯಾದ ಈಶ್ವರನು ಆತನನ್ನು ಕುರಿತು "ನಿನ್ನ ಮನೋಭಿಲಾಷೆ ಏನು?" ಎಂದು ಕೇಳಲು, ಶಿವಗುರುವು ಸಂತಾನಲಾಭಕ್ಕಾಗಿ ಪ್ರಾರ್ಥಿಸಿದನು.

"ನಿನಗೆ ಶಿವಭಕ್ತನಾಗಿ ಕೀರ್ತಿಗಳಿಸುವ, ಕೇವಲ ಎಂಟು ವರ್ಷ ಆಯುಸ್ಸುಳ್ಳ ಒಬ್ಬ ಮಗನೇ ಸಾಕೋ? ಅಥವಾ ದೀರ್ಘಾಯುಗಳೂ ಮತ್ತು ಮೂರ್ಖರೂ ಆದ ಬಹು ಪುತ್ರರು ಬೇಕೋ? ಯೋಚಿಸಿ ಹೇಳು" ಎಂದು ಈಶ್ವರನು ಕೇಳಿದನು. ಅದಕ್ಕೆ ಶಿವಗುರುವು "ದೇವ! ನಿನ್ನ ಭಕ್ತರಿಗೆ ಮೃತ್ಯುಭಯವೆಲ್ಲಿಯದು? ನಿನ್ನ ಕೃಪೆಯೊಂದಿದ್ದರೆ ಮಾರ್ಕಂಡೇಯನ ಆಯುಸ್ಸು ಹೆಚ್ಚಿದ ರೀತಿಯಲ್ಲಿ ನನ್ನ ಮಗನ ಆಯುಸ್ಸೂ ಸಹ ೮ ಇದ್ದದ್ದು ೧೬ ಆಗಿ ೧೬-೩೨ ಏಕೆ ಆಗಬಾರದು? ಮೂರ್ಖರು ಎಷ್ಟು ಜನರಿದ್ದರೇನು? ಅವರಿಂದ ಯಾವ ಸಿದ್ಧಿಯೂ ಆಗುವುದಿಲ್ಲ. ನಿನ್ನ ಭಕ್ತನೂ, ನಮ್ಮ ಹೆಸರನ್ನು ಉಳಿಸುವವನೂ ಆದ ಒಬ್ಬನೇ ಮಗನನ್ನು ಕರುಣಿಸು" ಎಂದು ನುಡಿಯಲು ಪರಮೇಶ್ವರನು "ನಿನ್ನ ಇಷ್ಟದಂತೆ ಆಗಲಿ" ಎಂದು ಹೇಳಿ ಅಂತರ್ಧಾನನಾದನು.

ಮಾರನೆಯ ದಿನ ಶಿವಗುರುವು ತನ್ನ ಪತ್ನಿಗೆ ಕನಸಿನ ವಿಷಯವನ್ನು ತಿಳಿಸಿದನು. ಆಕೆಗೆ ಬಹಳ ಸಂತೋಷವಾಯಿತು. ಶಿವ

ಬಾಲಬಂಧು

ಶಿವಗುರುವಿನ ಕನಸಿನಲ್ಲಿ ವೃಷಭಾಚಲೇಶ್ವರನು ಪ್ರಸಾದವಿತ್ತುದು.

ಗುರುವು ಈಶ್ವರಾನುಗ್ರಹದ ಸೂಚನೆಯಾಗಿ ದೇವಸ್ಥಾನದಲ್ಲಿ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿಸಿ ಕಾಲಟಿಯಲ್ಲಿನ ತನ್ನ ಮನೆಗೆ ಹೊರಟನು.

ಈಶ್ವರ ಪ್ರಸಾದದ ಮಹಿಮೆಯಿಂದ ಆರ್ಯಾಂಬೆಯು ಗರ್ಭಿಣಿಯಾದಳು. ಮಗನನ್ನು ಕಾಣುವ ದಿವಸವನ್ನು ದಂಪತಿಗಳು ಎದುರು ನೋಡುತ್ತಲಿದ್ದರು. ಹೀಗಿರಲು ಆರ್ಯಾಂಬೆಗೆ ನವ ಮಾಸಗಳು ತುಂಬಿದುವು. ನಂದನ ಸಂವತ್ಸರದ ವೈಶಾಖ-ಶುದ್ಧ ಪಂಚಮಿ ದಿನ ಬಂದಿತು. ಆದಿನ ಅಭಿಜನ್ಮುಹೂರ್ತದಲ್ಲಿ ಆರ್ಯಾಂಬೆಯು ಅದಿತಿಯು ವಾಮನನನ್ನು ಪಡೆದಂತೆಯೂ, ಪಾರ್ವತಿಯು ಷಣ್ಮುಖನನ್ನು ಪಡೆದಂತೆಯೂ ಸುಕುಮಾರನನ್ನು ಪಡೆದಳು.

ಮೇಷ ರಾಶಿಯಲ್ಲಿ ಸೂರ್ಯನೂ ; ವೃಷಭ ರಾಶಿಯಲ್ಲಿ ಬುಧ, ಶುಕ್ರರೂ ; ಕರ್ಕಾಟಕ ರಾಶಿಯಲ್ಲಿ ಗುರುವೂ ; ತುಲಾ ರಾಶಿಯಲ್ಲಿ ಶನಿಯೂ ; ಕುಜನು ಮಕರ ರಾಶಿಯಲ್ಲಿಯೂ ; ತಮ್ಮ ತಮ್ಮ ಉಚ್ಚಸ್ಥಾನಗಳಲ್ಲಿರುವಾಗ ಶಂಕರರು ಹುಟ್ಟಿದರು. ಆಗ ದೇವ ದುಂದುಭಿಯು ಮೊಳಗಿತು. ದೇವತೆಗಳು ಹೂಮಳೆ ಸುರಿಸಿದರು. ಆಕಾಶವು ಶುಭ್ರವಾಯಿತು. ಮಂದಮಾರುತ ಬೀಸಿತು. ಕೆರೆ, ತೊರೆಗಳುಕ್ಕಿದುವು. ಜನರೆಲ್ಲ ಜಯಘೋಷ ಮಾಡಿದರು. ಭೂಲೋಕದಲ್ಲಿ ಶಾಂತತೆಯು ನೆಲೆಗೊಂಡಿತು. ನಾಸ್ತಿಕರು ಭಯಗೊಂಡರು.

| | | | |
|---|---|---|---|
| | ರವಿ, ಬುಧ | ಲ-ಶು, ಚಂದ್ರ | ರಾಹು |
| | ಶ್ರೀ ಶಂಕರರ | ರಾಶಿ ಕುಂಡಲಿ | |
| ಕುಜ | | | |
| ಕೇತು | ಗುರು | ಶನಿ | |

| | | | |
|---|---|---|---|
| | ರವಿ | ಬುಧ ಶುಕ್ರ | ಚಂದ್ರ |
| | ಶ್ರೀ ಶಂಕರರ | ಅಂಶಕುಂಡಲಿ | ಗುರು ಲಗ್ನ |
| ಕುಜ | | | |
| | | ಶನಿ | |

ಇತ್ತ, ಶಿವಗುರುವು ತನಗೆ ಪುತ್ರನು ಹುಟ್ಟಿದ ವಾರ್ತೆಯನ್ನು ಕೇಳಿ ಪರಮಾನಂದವನ್ನು ಹೊಂದಿದನು. ಶಿವನನ್ನು ಬಗೆ ಬಗೆಯಾಗಿ ಸ್ತುತಿಸಿ ಕೊಂಡಾಡಿದನು. ಶಾಸ್ತ್ರ ರೀತ್ಯಾ ಜಾತ ಕರ್ಮಾದಿಗಳನ್ನು ನಡೆಸಿ, ಹನ್ನೊಂದನೆಯ ದಿವಸ ಶಂಕರನ ವರ ಪ್ರಸಾದದಿಂದ ಹುಟ್ಟಿದುದರಿಂದ ಆ ಮಗುವಿಗೆ 'ಶಂಕರ'ನೆಂದೇ ನಾಮಕರಣ ಮಾಡಿದನು. 'ಶಂಕರ' ಎನ್ನುವುದರಲ್ಲಿನ 'ಶ' ಎಂಬ ಅವರ್ಗೀಯದ ಐದನೆಯ ಅಕ್ಷರವು ಪಂಚಮಿ ತಿಥಿಯನ್ನೂ, 'ಕ' ಎಂಬ 'ಕವರ್ಗ'ದ ಮೊದಲನೆಯ ಅಕ್ಷರವು ಮೊದಲ (ಶುಕ್ಲ) ಪಕ್ಷವನ್ನೂ 'ರ' ಎಂಬ ಅವರ್ಗೀಯದ ಎರಡನೆಯ ಅಕ್ಷರವು ಎರಡನೆಯ ಮಾಸವಾದ ವೈಶಾಖ ಮಾಸವನ್ನೂ ತಿಳಿಸುವುವು.

ಶಿಶುವು ಶುಕ್ಲಪಕ್ಷದ ಬಾಲಚಂದ್ರನಂತೆ ದಿನೇದಿನೇ ಬೆಳೆಯುತ್ತಿರಲು ಒಂದು ದಿನ ಮಗುವು ಇದ್ದಕ್ಕಿದ್ದ ಹಾಗೆಯೇ ಅದೃಶ್ಯವಾಯಿತು. ಇದನ್ನು ಕಂಡ ಎಲ್ಲರೂ ಭಯಭ್ರಾಂತರಾದರು. ಆಗ ಒಬ್ಬ ಬ್ರಾಹ್ಮಣ ಬಂದು, ಮನೆಯಲ್ಲಿದ್ದ ಒಂದು ಕುಂಬಳಕಾಯಿಯನ್ನು ನೋಡಿ ಅದನ್ನು ಬೇಡಿದನು. ಅದನ್ನು ಆ ಬ್ರಾಹ್ಮಣನಿಗೆ ಕೊಡಲು, ಆತನು ಅದನ್ನು ಮುಟ್ಟಿದನು. ಒಡನೆಯೇ ಅದು ಬಿರಿದು, ಅದೃಶ್ಯವಾಗಿದ್ದ ಬಾಲಕನು ಅದರಿಂದ ಹೊರಗೆ ಬಂದನು. ಮಗುವನ್ನು ಕಂಡು ಎಲ್ಲರೂ ಆನಂದ ಭರಿತರಾದರು. ಹೀಗೆ ಶಂಕರನು ತಾನು ನಿರ್ಗುಣನೂ ಮತ್ತು ಸರ್ವ ವ್ಯಾಪಿಯೂ ಎಂಬುದನ್ನು ಪ್ರಕಟಿಸಿದನು.

ಒಂದು ದಿನ ಮಗುವು ತೊಟ್ಟಿಲಲ್ಲಿ ಮಲಗಿತ್ತು. ಅಲ್ಲಿಗೆ ಒಂದು ಹಾವು ಹರಿದುಬಂತು. ಅದನ್ನು ಕಂಡು ತಂದೆತಾಯಿಗಳು ಮಗುವಿನ ಗತಿ ಏನಾಗುವುದೋ ಎಂದು ಹೆದರಿ ದುಃಖಪಡುತ್ತಿದ್ದರು. ಆಗ ಆ ಹಾವು ಮಗುವಿನ ಕೊರಳಿಗೆ ಸುತ್ತಿಕೊಂಡು, ಕ್ಷಣದಲ್ಲಿ ಮಾಯ

ವಾಯಿತು ಮತ್ತು ಆ ಸ್ಥಳದಲ್ಲಿ ರುದ್ರಾಕ್ಷಿಯ ಮಾಲೆಯೊಂದು ಕಾಣಿಸಿತು. ಕೂಡಲೆ ತಾಯಿಯು ಮಗುವನ್ನು ಎತ್ತಿಕೊಂಡು ಮುದ್ದಾಡಿದಳು. ಆಗ ತಂದೆ ತಾಯಿಗಳಿಗಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಹೀಗೆ ಅವರು ಮಗುವಿನ ಬಾಲಲೀಲೆಗಳನ್ನು ಕಂಡು, ಕೇಳಿ ಆನಂದಿಸುತ್ತಿದ್ದರು.

## ಪ್ರಕರಣ ೩

## ಶಂಕರರ ಬಾಲಲೀಲೆಗಳು

ಒಮ್ಮೆ ಸತ್ಯಲೋಕದಲ್ಲಿ ಬ್ರಹ್ಮನು ವೇದ ಪಾಠವನ್ನು ಕೇಳಬೇಕೆಂದು ದೇವರ್ಷಿ, ಬ್ರಹ್ಮರ್ಷಿ ಮತ್ತು ಮಹರ್ಷಿಗಳಿಗೆ ಹೇಳಿ ಕಳುಹಿಸಿದನು. ದೂರ್ವಾಸರೇ ಮೊದಲಾದ ಎಲ್ಲ ಋಷಿಗಳೂ ಬಂದು ವೇದಪಠನ ಮಾಡಲುಪಕ್ರಮಿಸಿದರು. ಸರಸ್ವತಿಯು ವೇದಘೋಷಗಳನ್ನು ಕೇಳಿ ಸಂತೋಷಪಡುತ್ತಿದ್ದಳು. ಹೀಗಿರುವಾಗ ಪ್ರಮಾದವಶದಿಂದ ಸುಲಭ ಕೋಪಿಗಳಾದ ದೂರ್ವಾಸರು ಒಂದು ಕಡೆ ಸ್ವರ ವ್ಯತ್ಯಾಸವನ್ನು ಮಾಡಿದರು. ಅದನ್ನು ಕೇಳಿ ಸರಸ್ವತಿಯು ನಕ್ಕಳು.

ದೂರ್ವಾಸರು ಕೋಪಗೊಂಡು ಆಕೆಯನ್ನು "ಭೂಲೋಕದಲ್ಲಿ ಮನುಷ್ಯಳಾಗಿ ಅವತರಿಸು" ಎಂದು ಶಪಿಸಿದರು. ಸರಸ್ವತಿಯು ಖಿನ್ನಳಾಗಿ ಶಾಪ ಪರಿಹಾರಕ್ಕಾಗಿ ದೂರ್ವಾಸರನ್ನು ಬೇಡಿದಳು. ದೂರ್ವಾಸರು ಆ ಪ್ರಾರ್ಥನೆಯನ್ನು ಮನ್ನಿಸಿ ಶಾಪ ಪರಿಹಾರವನ್ನು ಹೀಗೆ ತಿಳಿಸಿದರು:

"ಭಗವಾನ್ ಶಂಕರನು ಲೋಕೋದ್ಧಾರಕ್ಕಾಗಿ ಭೂಮಿಯಲ್ಲಿ ಅವತರಿಸುತ್ತಾನೆ. ಶಂಕರನಿಂದ ಆಜ್ಞಪ್ತನಾದ ಬ್ರಹ್ಮನು ಹಿಮಮಿತ್ರ ಭಟ್ಟಾಚಾರ್ಯನ ಮಗನಾಗಿ, ಮಂಡನಮಿಶ್ರನೆಂಬ ಹೆಸರಿನಿಂದ ಮಾಹಿಷ್ಮತೀ ಪಟ್ಟಣದಲ್ಲಿ ಹುಟ್ಟುವನು. ನೀನು ಉಭಯಭಾರತಿ ಎಂಬ

ಹೆಸರಿನಿಂದ ವಿಷ್ಣುಸುಮಿತ್ರ ಭಟ್ಟಾಚಾರ್ಯನ ಮಗಳಾಗಿ ಹುಟ್ಟಿ ಮಂಡನಮಿಶ್ರನನ್ನು ಮದುವೆಯಾಗಿ ಸಂಸಾರ ಮಾಡಿಕೊಂಡಿರು. ಶಂಕರನು ಶಾಸ್ತ್ರಾರ್ಥ ವಾದಕ್ಕಾಗಿ ನಿನ್ನ ಬಳಿಗೆ ಬರುತ್ತಾನೆ. "ನಾನೇ ಹೆಚ್ಚೆಂದು" ತಿಳಿದು ನನ್ನನ್ನು ಅಪಹಾಸ್ಯ ಮಾಡಿದ ನೀನು ಆತನಿಂದ ವಾದದಲ್ಲಿ ಅಪಜಯ ಹೊಂದಿದ ಮೇಲೆ ನಿನಗೆ ಶಾಪ ಪರಿಹಾರ ವಾಗುವುದು" ಅದರಂತೆಯೇ ಸರಸ್ವತಿಯು ಭೂಲೋಕದಲ್ಲಿ ಉಭಯ ಭಾರತಿ ಎಂಬ ಹೆಸರಿನಿಂದ ಜನಿಸಿದಳು.

ಸಮಸ್ತ ಜನಗಳಿಗೂ ಪ್ರಾಣಾಧಾರಕನಾದ ವಾಯುದೇವನು ಪ್ರಭಾಕರನೆಂಬ ಬ್ರಾಹ್ಮಣನಿಗೆ ಮಗನಾಗಿ ಹುಟ್ಟಿ ಕೆಲವು ದಿನ ಮೂಕ ನಂತಿದ್ದನು. ಆಮೇಲೆ ಶಂಕರರ ಶಿಷ್ಯನಾಗಿ ಹಸ್ತಾಮಲಕನೆಂಬ ನಾಮವನ್ನು ಹೊಂದಿ ಪ್ರಸಿದ್ಧಿಗೆ ಬಂದನು. ಯಜ್ಞ ಪುರುಷನು ಕಳಾ ನಾಥನೆಂಬ ಬ್ರಾಹ್ಮಣನ ಮಗನಾಗಿ ಹುಟ್ಟಿ ತೋಟಕಾಚಾರ್ಯನೆಂಬ ಹೆಸರಿನಿಂದ ಭೂಲೋಕದಲ್ಲಿ ಮೆರೆದನು.

ನಂದೀಶ್ವರ, ವೀರಭದ್ರ, ಗಣಪತಿ, ಇವರುಗಳ ಅಂಶಗಳಿಂದ ಹುಟ್ಟಿದವನೇ ಉದಂಕನೆಂಬ ಹೆಸರನ್ನು ಪಡೆದನು. ಈರೀತಿ ಬ್ರಹ್ಮಾದಿ ದೇವತೆಗಳು ಭೂಲೋಕದಲ್ಲಿ ಅವತರಿಸಿ ಪರಮೇಶ್ವರನ ಸೇವೆಗಾಗಿ ಕಾದಿದ್ದರು.

ಇತ್ತ ಕಾಲಟಿಯಲ್ಲಿನ ಬ್ರಾಹ್ಮಣರು ಶಂಕರರ ಜನ್ಮೋತ್ಸವ ಸಂದರ್ಭದಲ್ಲಿ ವೃಷಭಾಚಲದ ಶಿವಾಲಯದಲ್ಲಿ ವಿಶೇಷ ಪೂಜೆಯನ್ನು ಸಲ್ಲಿಸಿದರು. ಅದಕ್ಕಾಗಿಯೇ ಕಟ್ಟಲ್ಪಟ್ಟ ಒಂದು ಬಿಲ್ವಪತ್ರೆಯ ಮಾಲೆ ಯನ್ನು ಶಿವನಿಗೆ ಅರ್ಪಿಸಿ ಅಗ್ರಹಾರಕ್ಕೆ ಹಿಂತಿರುಗಿದರು. ದೇವರಿಗೆ ಸಮರ್ಪಿಸಿದ್ದ ಬಿಲ್ವಮಾಲೆಯು ಮನೆಯಲ್ಲಿದ್ದ ಬಾಲಶಂಕರರ ಕೊರಳಲ್ಲಿ ಇರುವುದನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಪುನಃ ದೇವಸ್ಥಾನಕ್ಕೆ

ಹೋಗಿ ನೋಡಲು ಅಲ್ಲಿ ತಾವು ಅಲಂಕಾರ ಮಾಡಿದ್ದ ಆ ಮಾಲೆ ಇರಲಿಲ್ಲ.

ಇನ್ನೊಂದು ದಿನ ಶಿವಗುರು ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿಸಿದನು. ಭೋಜನಾನಂತರ ಬ್ರಾಹ್ಮಣರೆಲ್ಲರೂ ಶಂಕರರನ್ನು ಹೊಗಳುತ್ತಾ ಕುಳಿತಿರಲು ಇದ್ದಕ್ಕಿದ್ದ ಹಾಗೆಯೇ ಸುಂಟರಗಾಳಿಯು ಎದ್ದಿತು. ಶಂಕರರು ಆ ಕೆಂಧೂಳಿನ ಮಧ್ಯದಲ್ಲಿ ಆಕಾಶಕ್ಕೆ ಒಯ್ಯಲ್ಪಟ್ಟರು. ಅದನ್ನು ನೋಡಿದ ಜನರು ಗಾಬರಿಗೊಂಡರು. ತಾಯಿ-ತಂದೆಗಳು ಮಗನನ್ನು ಕಾಣದೆ ದುಃಖದಿಂದ ದಿಕ್ಕುತೋಚದೆ ಪರಮಾತ್ಮನಲ್ಲಿ ಮೊರೆಯಿಡುತ್ತಾ ಕುಳಿತುಬಿಟ್ಟರು.

ಇದನ್ನು ನೋಡಿ ಅಲ್ಲಿದ್ದ ಹಿರಿಯರಾದ ಬಂಧು ಜನಗಳು ಶಂಕರರನ್ನು ಹುಡುಕುವುದಕ್ಕಾಗಿ ಎಂಟು ದಿಕ್ಕುಗಳಿಗೂ ಎಂಟು ಜನರನ್ನು ಕಳುಹಿಸಿದರು. ಪರಮಾತ್ಮನು ಶಂಕರರೂಪದಿಂದ ಎಂಟು ಜನರಿಗೂ ದರ್ಶನಕೊಟ್ಟನು. ಅವರೆಲ್ಲರೂ ತಾವು ಕಂಡ ಒಂದೊಂದು ಮಗುವನ್ನು ಕರೆತಂದರು. ತಾಯಿ-ತಂದೆಗಳು ಎಂಟು ಜನ ಮಕ್ಕಳಲ್ಲಿ ತಮ್ಮ ಮಗನು ಯಾರೆಂದು ತಿಳಿಯದೆ ಭ್ರಾಂತರಾಗಿರಲು ಆ ಸಮಯಕ್ಕೆ ಸರಿಯಾಗಿ ಬ್ರಾಹ್ಮಣನೊಬ್ಬನು ಬಂದನು. ಆತನು ಶಿವಗುರುವಿಗೆ ಪರಿಚಿತನಾಗಿದ್ದನು. ಬಾಲಶಂಕರರನ್ನು ಎತ್ತಿಕೊಂಡು ಬಂದಿದ್ದ ಆತನು ಶಿವಗುರುವನ್ನು ಕುರಿತು "ಎಲೈ ಸಖನೇ! ನಿನ್ನ ಮಗನಾದ ಈ ಬಾಲಕನು ಶ್ರೀಕೃಷ್ಣನ ದೇವಾಲಯದಲ್ಲಿ ಕುಳಿತಿದ್ದನು. ನಾನು ಕರೆತಂದಿರುವೆನು. ನಿನ್ನ ಮಗನನ್ನು ಕರದುಕೋ" ಎಂದು ಹೇಳಿ ಮಗುವನ್ನು ಕೊಟ್ಟನು. ಶಿವಗುರುವು ಮಗುವನ್ನು ಎತ್ತಿಕೊಂಡನು. ಆ ತಕ್ಷಣ ಅಲ್ಲಿದ್ದ ಬೇರೆ ಎಂಟು ಮಕ್ಕಳೂ ಮಾಯವಾದುವು.

ತರುವಾಯ ಸಕಲ ಬ್ರಾಹ್ಮಣರೂ ಬಂಧುಗಳೂ ಬಾಲಕನ ಮಹಿಮೆಯನ್ನು ಕೊಂಡಾಡಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ವೃಷಭ ಪರ್ವತದಲ್ಲಿ ಪ್ರತಿವರ್ಷವೂ ಈಶ್ವರನ ರಥೋತ್ಸವವು ನಡೆಯುತ್ತಿತ್ತು. ಅದರಂತೆ ಆ ವರ್ಷ ರಥೋತ್ಸವದಲ್ಲಿ ರಥದಲ್ಲಿದ್ದ ಈಶ್ವರನ ವಿಗ್ರಹವು ಕಾಣದೆ ಅದರ ಸ್ಥಾನದಲ್ಲಿ ಬಾಲಶಂಕರರು ವಿರಾಜಿಸುತ್ತಿರುವುದನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾದರು. ಸ್ವಲ್ಪ ಹೊತ್ತಾದ ನಂತರ ರಥದಲ್ಲಿ ಮೊದಲಿನಂತೆಯೇ ಅಲಂಕೃತವಾದ ಪರಮೇಶ್ವರ ವಿಗ್ರಹವು ಕಣ್ಣಿಗೆ ಗೋಚರಿಸಿತು. ಬಾಲಶಂಕರರು ತಾಯಿ ಬಳಿಯಲ್ಲಿಯೇ ಇದ್ದರು.

ಶಂಕರರ ಈ ಬಾಲಲೀಲೆಗಳನ್ನು ಕಂಡ ಜನರು "ಈ ಬಾಲಕನು ಸಾಕ್ಷಾತ್ ಶಂಕರನ ಅವತಾರವೇ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ" ಎಂದು ಹೇಳಿಕೊಳ್ಳುತ್ತಾ ಆತನನ್ನು ಬಗೆಬಗೆಯಾಗಿ ಕೊಂಡಾಡಿದರು.

ಮತ್ತೊಂದು ದಿನ ಕಾಲಟಿಯ ಕೆಲವು ಬ್ರಾಹ್ಮಣರು ತಮ್ಮ ಮುಂದೆ ಒಂದು ಕುಂಬಳಕಾಯಿಯನ್ನು ಇಟ್ಟುಕೊಂಡು "ಇದರಲ್ಲಿ ಎಷ್ಟು ಬೀಜಗಳಿವೆ?" ಎಂದು ಪರಸ್ಪರ ಪ್ರಶ್ನೆ ಮಾಡುತ್ತಾ ಚರ್ಚಿಸುತ್ತಿದ್ದರು. ಒಬ್ಬನು ಮೂರೆಂತಲೂ, ಇನ್ನೊಬ್ಬನು ನೂರೆಂತಲೂ, ಮತ್ತೊಬ್ಬನು ಇನ್ನೂರೆಂತಲೂ ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿದರು. ಒಬ್ಬನು ಹೇಳಿದುದಕ್ಕೆ ಮತ್ತೊಬ್ಬನು ಒಪ್ಪದೆ ಎಲ್ಲರೂ ಅಲ್ಲಿದ್ದ ಬಾಲಶಂಕರರನ್ನು ಕೇಳಿದರು. "ಈ ಜಗತ್ತಿನ ಮೂಲ ಕಾರಣಕ್ಕೆ ಬೀಜವು ಎಷ್ಟೋ ಈ ಕುಂಬಳಕಾಯಿಯಲ್ಲಿಯೂ ಅಷ್ಟೇ ಇದೆ" ಎಂದು ಶಂಕರರು ಹೇಳಲು ಅವರು ಆ ಕುಂಬಳಕಾಯಿಯನ್ನು ಒಡೆದರು. ಚೆನ್ನಾಗಿ ಪರೀಕ್ಷಿಸಿ ನೋಡಲು ಅದರಲ್ಲಿ ಒಂದೇ ಒಂದು ಬೀಜವಿರುವುದು ಕಾಣಿಸಿತು.

"ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಪ್ರಕೃತಿಯೇ ಕಾರಣ. ಈ ಪ್ರಕೃತಿಯ ಉತ್ಪತ್ತಿಗೆ ಪುರುಷನೇ ಕಾರಣ. ಆ ಪುರುಷನೇ ಬೀಜ ಸ್ವರೂಪ. ಆ ಪುರುಷನನ್ನು ಆತ್ಮನೆಂದೂ, ಪರಾತ್ಮನೆಂದೂ, ಪರಮಾತ್ಮನೆಂದೂ, ಬ್ರಹ್ಮನೆಂದೂ, ಪರಬ್ರಹ್ಮನೆಂದೂ ಅನೇಕ ಹೆಸರುಗಳಿಂದ ಕರೆಯುತ್ತಾರೆ. ವೇದವೂ ಇದನ್ನೇ ತಿಳಿಸುತ್ತದೆ. "ಏಕಮೇವಾಽ ದ್ವಿತೀಯಂ ಬ್ರಹ್ಮ" ಎಂದರೆ "ಪರಬ್ರಹ್ಮ ಸ್ವರೂಪವೆಂಬ ವಸ್ತುವು ಒಂದಲ್ಲದೆ ಎರಡಲ್ಲ" ಎಂಬ ತತ್ವವನ್ನು ತಿಳಿಸುವುದಕ್ಕಾಗಿಯೇ ಬಾಲಶಂಕರರು 'ಒಂದು' ಎಂಬುದನ್ನು ಲೋಕಕ್ಕೆ ಮೂಲಕಾರಣವಾದ ಬೀಜಸಂಖ್ಯೆ ಎಂದು ಹೇಳಿದರು.

ಹೀಗೆ ಶಂಕರರು ಬಾಲ್ಯದಲ್ಲಿಯೇ ಅದ್ಭುತವಾದ ಮಹಿಮೆಗಳನ್ನೂ ಪೂರ್ಣವಾದ ಜ್ಞಾನವನ್ನೂ ತೋರಿಸುತ್ತಾ ಬೆಳೆದರು.

## ಪ್ರಕರಣ ೪

## ಶಂಕರರ ವಿದ್ಯಾಭ್ಯಾಸ

ಕಾಲಟಿಯಲ್ಲಿ ಬಾಲಶಂಕರರು ತಮ್ಮ ಶೈಶವ ಲೀಲೆಗಳಿಂದ ತಂದೆ ತಾಯಿಗಳಿಗೆ ಸಂತೋಷವನ್ನುಂಟು ಮಾಡುತ್ತಾ ಇದ್ದರು. ಹೀಗಿರಲು ಒಂದು ದಿನ ಬೃಹಸ್ಪತ್ಯಾಚಾರ್ಯರು ಶಂಕರರ ಸ್ವಪ್ನದಲ್ಲಿ ಬಂದು ಚಾರ್ವಾಕಮತದ ರಹಸ್ಯವನ್ನು ತಿಳಿಸಿದರು. ಅದೇ ರೀತಿಯಲ್ಲಿ ಶ್ರೀಕೃಷ್ಣ ಪರಮಾತ್ಮನು ಸತ್ಯಾದ್ವೈತಮತದ ರಹಸ್ಯಗಳನ್ನು ತಿಳಿಸಿದನು.

ಶಂಕರರು ಎರಡನೆಯ ವಯಸ್ಸಿನಲ್ಲಿರುವಾಗಲೇ ಸಂಸ್ಕೃತ ವ್ಯಾಸಂಗವನ್ನು ಕೈಗೊಂಡು ಸಂಸ್ಕೃತ ಭಾಷಾಜ್ಞಾನವನ್ನು ಪಡೆದರು. ಈ ರೀತಿಯ ವಿದ್ಯಾಪಾಂಡಿತ್ಯವನ್ನು ಹೊಂದಿ ಜನರ ಮೆಚ್ಚುಗೆಗೆ ಪಾತ್ರನಾದ ಮಗನನ್ನು ಕಂಡು ಶಿವಗುರುವಿಗೆ ಆನಂದವಾಗುತ್ತಿತ್ತು.

ಆದರೆ ಆ ಮಗುವಿನ ಆಯುಃಪರಿಮಿತಿಯನ್ನು ನೆನೆಸಿಕೊಂಡಾಗ ದುಃಖವು ಉಕ್ಕಿ ಬರುತ್ತಿತ್ತು. ಆಗ 'ಶಂಕರನಿಗೆ ದೀರ್ಘಾಯುಷ್ಯ ವನ್ನು ಕರುಣಿಸು' ಎಂದು ಪರಮೇಶ್ವರನನ್ನು ಅತಿ ದೈನ್ಯದಿಂದ ಪ್ರಾರ್ಥಿಸುತ್ತಿದ್ದನು. ಅಷ್ಟಲ್ಲದೆ ಆತನು ಇನ್ನೇನನ್ನು ತಾನೇ ಮಾಡ ಬಲ್ಲನು!

ಬಾಲಕನಿಗೆ ಎರಡು ವರ್ಷ ಕಳೆದು ಮೂರನೆ ವರ್ಷ ಪ್ರಾಪ್ತ ವಾಯಿತು. ತಂದೆಯು, ಸಕಾಲದಲ್ಲಿ ಮಗುವಿಗೆ ಚೌಲಕರ್ಮವನ್ನು ನೆರವೇರಿಸಬೇಕೆಂದು ಯೋಚಿಸಿದನು. ಬಂಧುಗಳನ್ನೂ ಬ್ರಾಹ್ಮಣರನ್ನೂ ಕರೆಯಿಸಿ ಮಂಗಳ ಮುಹೂರ್ತವನ್ನು ಗೊತ್ತು ಮಾಡಿಸಿದನು. ಆ ಶುಭ ಮುಹೂರ್ತದಲ್ಲಿ, ಶಂಕರರ ಚೌಲಕರ್ಮವು ಶಾಸ್ತ್ರೋಕ್ತವಾಗಿ ನೆರವೇರಿಸಲ್ಪಟ್ಟಿತು. ಬ್ರಾಹ್ಮಣರು ಪರಿಪರಿಯಾದ ದಾನ, ಮೃಷ್ಟಾನ್ನ ಭೋಜನ, ಗಂಧ, ಪುಷ್ಪ ಫಲತಾಂಬೂಲಾದಿಗಳಿಂದ ತೃಪ್ತಿಗೊಳಿ ಸಲ್ಪಟ್ಟರು. ವಸ್ತ್ರಾಭರಣವೇ ಮೊದಲಾದ ಉಡುಗೊರೆಗಳಿಂದ ಸಕಲ ಬಾಂಧವರನ್ನೂ ಉಪಚರಿಸಿ, ಶಿವಗುರುವು ಸಾಕ್ಷಾತ್ ಪರ ಶಿವನಿಗೆ ಗುರು (ತಂದೆಯಾಗಿ) ವಾಗಿ ಮೆರೆದನು.

ಶಂಕರರು ಗುರುಮುಖದಿಂದ ಸಕಲ ಪ್ರಾಥಮಿಕ ವಿದ್ಯೆಗಳನ್ನೂ ಕಲಿತರು. ಕಾವ್ಯದಲ್ಲಿ ಪಾಂಡಿತ್ಯವನ್ನೂ, ತರ್ಕಶಾಸ್ತ್ರದಲ್ಲಿ ಪ್ರಾವೀಣ್ಯತೆ ಯನ್ನೂ ವ್ಯಾಕರಣದಲ್ಲಿ ವಿದ್ವತ್ತನ್ನೂ ಪಡೆದರು. ತನ್ನ ಮೂರು ವರ್ಷದ ಮಗನ ಅಪ್ರತಿಮ ಪಾಂಡಿತ್ಯವನ್ನು ನೋಡಿ, ನೋಡಿ ಶಿವಗುರು ಅತಿಶಯವಾದ ಆನಂದವನ್ನು ಹೊಂದಿದನು.

ಹೀಗಿರಲು ಶಿವಗುರುವಿಗೆ ವೃದ್ಧಾಪ್ಯ ಒದಗಿತು ಇದನ್ನು ತಿಳಿದು ಮಗನಿಗೆ ಉಪನಯನ ಮಹೋತ್ಸವವನ್ನು ನೆರವೇರಿಸಿದರೆ ತನ್ನ ಮನಸ್ಸಿಗೆ ಸಂತೋಷವಾಗುವುದೆಂದು ಪದೇಪದೇ ಆಲೋಚಿಸುತ್ತಿದ್ದನು.

ಆದರೆ ದೈವೇಚ್ಛೆಯೇ ಬೇರೆಯಾಗಿದ್ದಿತು. ಮಗನ ಉಪನಯನ ಮಹೋತ್ಸವವನ್ನು ನೋಡಿ ಆನಂದಿಸುವ ಭಾಗ್ಯ ತಂದೆಗೆ ಇರಲಿಲ್ಲ. ಶಿವಗುರುವು, ತನ್ನ ಇಚ್ಛೆಯು ನೆರವೇರುವುದಕ್ಕೆ ಮುಂಚೆಯೇ ಕಾಲ ವಶನಾದನು. ಪರಮೇಶ್ವರನ ಪಾದಾರವಿಂದಗಳಲ್ಲಿ ಶಿವಗುರುವಿಗೆ ಶಾಶ್ವತವಾದ ಸ್ಥಾನ ದೊರೆಯಿತು.

ಆರ್ಯಾಂಬೆಯು, ತನ್ನ ಪತಿಯು ಮೃತನಾದುದನ್ನು ಕಂಡು ಶೋಕಾಧಿಕ್ಯದಿಂದ ಮೂರ್ಛೆ ಹೋದಳು. ಅನಂತರ ಬಂಧುಗಳ ಉಪಚಾರದಿಂದ ಚೇತರಿಸಿಕೊಂಡು ಬಹು ವಿಧವಾಗಿ ಪ್ರಲಾಪಿಸಿದಳು. ಹೀಗೆ ದುಃಖಪಡುತ್ತಿರುವ ತಾಯಿಯನ್ನು ಕಂಡು, ಬಾಲಶಂಕರರು ಸಮಾಧಾನ ಪಡಿಸುತ್ತಾ "ಅಮ್ಮಾ! ಪ್ರಪಂಚದಲ್ಲಿ ಯಾವ ಪ್ರಾಣಿ ಮಾತ್ರಕ್ಕೂ ಮರಣವು ತಪ್ಪಿದುದಲ್ಲ. ಹುಟ್ಟಿದವನು ಸಾಯಲೇಬೇಕು. ಇದು ವಿಧಿನಿಯಮ. ಇದಕ್ಕೆ ಶೋಕಿಸಿ ಏನು ಪ್ರಯೋಜನ? ಲೋಕೇಶ್ವರನಾದ ಪರಮೇಶ್ವರನನ್ನು ಧ್ಯಾನಿಸುತ್ತಾ, ಧೈರ್ಯವನ್ನು ತಂದುಕೊಂಡು, ಈಶ್ವರೇಚ್ಛೆಯಿಂದ ಬಂದ ಕಷ್ಟ-ಸುಖಗಳನ್ನು ಅನುಭವಿಸುತ್ತಾ ಸಮಾಧಾನದಿಂದಿರುವುದು ವಿವೇಕಿಗಳ ಲಕ್ಷಣ. ಆದುದರಿಂದ ದುಃಖವನ್ನು ಬಿಡು" ಎಂದು ಸಂತೈಸಿದರು.

ಕೆಲನಿಮಿಷಗಳ ನಂತರ ಆರ್ಯಾಂಬೆಯು ತನ್ನ ದುಃಖವನ್ನು ಶಮನಮಾಡಿಕೊಂಡು, ಮೊದಲಿನಂತೆ ಸಮಾಧಾನ ಚಿತ್ತಳಾದಳು. ಪತಿಗೆ ಮಾಡಬೇಕಾದ ಔರ್ಧ್ವದೈಹಿಕ (ಸತ್ತನಂತರ ಮಾಡತಕ್ಕ) ಕರ್ಮಗಳನ್ನು ತನ್ನ ದಾಯಾದಿಗಳಿಂದ ಮಾಡಿಸಿದಳು. ಆರ್ಯಾಂಬೆಯ ಪತಿಯು ಕಾಲವಾಗಿ ಒಂದು ವರ್ಷವು ಕಳೆದ ತರುವಾಯ ಬಾಲಶಂಕರರಿಗೆ ನಾಲ್ಕು ವರ್ಷಗಳು ತುಂಬಿದುವು.

ಐದನೆಯ ವರ್ಷದ ವಸಂತ ಸಮಯದಲ್ಲಿ ಆರ್ಯಾಂಬೆಯು, ತನ್ನ ಮಗನಿಗೆ ತನ್ನ ಬಂಧುಗಳಿಂದ ಬ್ರಹ್ಮೋಪದೇಶವನ್ನು ಮಾಡಿ

ಸಿದಳು. ಉಪನಯನ ಮಹೋತ್ಸವವು ಸಾಂಗವಾಗಿ ನೆರವೇರಿಸಲ್ಪಟ್ಟಿತು. ಮೌಂಜೀಧಾರಣೆ, ಉಪವೀತಧಾರಣೆ, ಗಾಯತ್ರೀ ಉಪದೇಶ ಮೊದಲಾದ ಕರ್ಮಗಳು ಶಾಸ್ತ್ರೋಕ್ತವಾಗಿ ನೆರವೇರಿಸಲ್ಪಟ್ಟ ನಂತರದಲ್ಲಿ ಶಂಕರರು ವಾಮನನ ರೂಪದಲ್ಲಿರುವ ವಿಷ್ಣುವಿನಂತೆ ತೇಜೋವಂತರಾದರು. –

ಅನಂತರ ಶಂಕರರು ಗುರುಕುಲವನ್ನು ಸೇರಿ ವಿಧಿಯಂತೆ ಸಂಧ್ಯಾವಂದನೆ, ಭಿಕ್ಷಾಟನೆಗಳನ್ನು ಆಯಾ ಕಾಲದಲ್ಲಿ ನೆರವೇರಿಸುತ್ತಾ ವೇದಾಧ್ಯಯನ ಮಾಡತೊಡಗಿದರು. ಗುರುವಿನ ಬಳಿಯಲ್ಲಿಯೇ ಇದ್ದುಕೊಂಡು ಅವರ ಸೇವೆಯನ್ನು ಮಾಡುತ್ತಾ ಅವರ ಕೃಪೆಗೆ ಪಾತ್ರರಾದರು. ಒಂದು ದಿನ ಶಂಕರರಿಗೂ, ಗುರುಗಳಿಗೂ ಈ ರೀತಿಯ ಹಲವು ಪ್ರಶ್ನೋತ್ತರಗಳಾದುವು.

ಪ್ರಶ್ನೆ ೧.— ಸ್ವಾಮಿ, ಭೋಜನದ ಸಮಯದಲ್ಲಿ ಪರಿಷೇಚನವಿಲ್ಲದೆ ಊಟ ಮಾಡಬಾರದೆಂಬ ನಿಯಮವೇಕೆ?

ಉತ್ತರ—ಅನ್ನವು ಪರಬ್ರಹ್ಮ ಸ್ವರೂಪವು. "ಈ ಅನ್ನದ ಸಾಕ್ಷಿಯಾಗಿಯೂ ನಾನು ಸತ್ಯವನ್ನು ಹೇಳುತ್ತೇನೆ" ಎಂದು ಪರಿಷೇಚನವು ತಿಳಿಸುತ್ತದೆ. "ಋತಂ ಚ ಸತ್ಯೇನ ಪರಿಷಿಂಚಾಮಿ" ಎಂಬ ಮಂತ್ರದ ಅರ್ಥವೂ ಇದೇ! ಸತ್ಯಕ್ಕಿಂತಲೂ ಶ್ರೇಷ್ಠವಾದ ಧರ್ಮ ಮತ್ತೊಂದಿಲ್ಲ. ವೇದವೂ ಇದನ್ನೇ ಸಾರುತ್ತದೆ. ಇಂತಹ ಸತ್ಯವನ್ನು ಬ್ರಾಹ್ಮಣರು ಕಾಪಾಡಬೇಕು. ಆದುದರಿಂದಲೇ ಅನ್ನ ಸಾಕ್ಷಿಯಾಗಿಯೂ ಸತ್ಯವನ್ನು ಹೇಳುತ್ತೇನೆ ಎಂದು ಶಪಥ ಮಾಡುವುದು.

ಪ್ರಶ್ನೆ ೨.—ಪ್ರಾಣಾಯಾಮವೆಂದರೇನು ?

ಉತ್ತರ—ಪ್ರಾಣಾಯಾಮವೆಂಬುದು ಅಷ್ಟಾಂಗ ಯೋಗಗಳಲ್ಲಿ ಒಂದಾಗಿದೆ. ಪ್ರಾಣಾಯಾಮವೆಂದರೆ ಪ್ರಾಣಕ್ಕೆ ವಿಶ್ರಾಂತಿ ಅಥವಾ

ರಕ್ಷಣೆ ಎಂದರ್ಥ. ಹೊರಗಿನ ಗಾಳಿಯನ್ನು ಮೂಗಿನ ಬಲಹೊಳ್ಳೆಯ ಮೂಲಕ ಒಳಗೆಳೆದುಕೊಂಡು ಕೆಲಕಾಲ ಸ್ಥಂಭಿಸಿ (ಉಸಿರು ಕಟ್ಟಿ) ನಂತರ ನಿಧಾನವಾಗಿ ಎಡಹೊಳ್ಳೆಯಿಂದ ಹೊರಗೆ ಬಿಡುವುದಕ್ಕೆ "ಪ್ರಾಣಾಯಾಮ" ಎಂದು ಹೆಸರು. ಎಷ್ಟು ನಿಮಿಷಗಳ ಕಾಲ ಗಾಳಿಯನ್ನು ಎಳೆದುಕೊಳ್ಳುತ್ತೇವೆಯೋ ಅದರ ನಾಲ್ಕರಷ್ಟು ಕಾಲ ಸ್ಥಂಭಿಸಿ ಎರಡರಷ್ಟು ಕಾಲದಲ್ಲಿ ಅದನ್ನು ಹೊರಗೆಡಹಬೇಕು. ಗಾಳಿಯನ್ನು ಒಳಗೆಳದುಕೊಳ್ಳುವುದಕ್ಕೆ "ಪೂರಕ" ವೆಂದೂ ಹಾಗೆ ತೆಗೆದುಕೊಂಡ ಗಾಳಿಯನ್ನು ಅಲ್ಲಿಯೇ ಸ್ಥಿರವಾಗಿ ನಿಲ್ಲಿಸುವುದಕ್ಕೆ "ಕುಂಭಕ" ವೆಂದೂ ಆ ಗಾಳಿಯನ್ನು ಹೊರಗೆಡಹುವುದಕ್ಕೆ "ರೇಚಕ" ವೆಂದೂ ಹೆಸರು.

ನಿರ್ಮಲವಾದ ಗಾಳಿಯು ದೇಹದೊಳಗೆ ಸೇರಿ ಕುಂಭಕದ ಸಮಯದಲ್ಲಿ ರಕ್ತವನ್ನು ಶುದ್ಧಿಗೊಳಿಸುತ್ತದೆ. ರಕ್ತವು ಶುದ್ಧಿಗೊಳ್ಳು ವುದರಿಂದ ಆರೋಗ್ಯವು ಕೆಡದೆ ಚೆನ್ನಾಗಿರುತ್ತದೆ. ಈ ಪ್ರಾಣಾಯಾಮ ವನ್ನು ಗೊತ್ತಾದ ಕಾಲಗಳಲ್ಲಿ ಕ್ರಮವರಿತು ಮಾಡುವುದರಿಂದ ದೇಹಾ ರೋಗ್ಯ ಮಾತ್ರವಲ್ಲದೆ ಆಯುಃಪರಿಮಿತಿಯೂ ಹೆಚ್ಚುತ್ತದೆ. ನಿಮಿಷಕ್ಕೆ ಹದಿನಾರು ಬಾರಿ ಉಸಿರಾಡಿದಲ್ಲಿ ನಲವತ್ತು ವರುಷ ಬದುಕುವವನು ನಿಮಿಷಕ್ಕೆ ಎಂಟುಬಾರಿ ಉಸಿರಾಡಿ ಎಂಭತ್ತು ವರ್ಷ ಬದುಕಬಲ್ಲನಲ್ಲವೆ! ಎಂದರೆ ಆಯಸ್ಸು ಒಂದಕ್ಕೆ ಎರಡರಷ್ಟಾಗುವುದು. ಈ ಪ್ರಾಣಾಯಾಮ ದಿಂದ ಮೆದುಳು ವಿಕಾಸಗೊಂಡು ಚಿತ್ತಶುದ್ಧಿಯೂ ಉಂಟಾಗುತ್ತದೆ.

ಪ್ರಶ್ನೆ ೩.—ಗಾಯತ್ರೀ ಅಂದರೇನು? ಅದರ ಹೆಚ್ಚುಗಾರಿಕೆ ಹೇಗೆ?

ಉತ್ತರ—'ಗಾಯಂತಂ ತ್ರಾಯತಿ ಇತಿ ಗಾಯತ್ರೀ' ಎಂದರೆ ಭಾರಿಬಾರಿಗೂ ನೆನೆಯುವವನನ್ನು (ಪುನಶ್ಚರಣೆ ಮಾಡುವವನನ್ನು) ಭವ

ಭೀತಿಯಿಂದ (" ತ್ರಾಯತಿ ") ಕಾಪಾಡುತ್ತದೆ ಎಂದು ಅರ್ಥ. ಇದು ಎಲ್ಲ ಮಂತ್ರಗಳಿಗಿಂತಲೂ ಉತ್ತಮವಾದದ್ದು. " ನ ಗಾಯತ್ರ್ಯಾಃ ಪರಂ ಮಂತ್ರಃ ನ ಮಾತುಃ ಪರದೇವತಾ " ಗಾಯತ್ರಿಗೆ ಸಮಾನವಾದ ಮಂತ್ರವಿನ್ನೊಂದಿಲ್ಲ. ತಾಯಿಗೆ ಮಿಗಿಲಾದ ದೇವತೆಯಿಲ್ಲ.

ಇದು ೨೪ ಅಕ್ಷರಗಳಿಂದ ಕೂಡಿದ ಪವಿತ್ರ ಮಂತ್ರ. ಪಾದಕ್ಕೆ ಎಂಟಕ್ಷರದಂತೆ ಮೂರು ಪಾದಗಳಿವೆ. ಅದನ್ನು ಪ್ರತಿದಿನವೂ ಜಪಿಸುವುದರಿಂದ ವರ್ಚಸ್ಸು ಮತ್ತು ತೇಜಸ್ಸು ಉಂಟಾಗುತ್ತದೆ. ಗಾಯತ್ರಿಯನ್ನು ಜಪಿಸದಿದ್ದವನು ಬೇರಾವ ಮಂತ್ರದ ಸಿದ್ಧಿಯನ್ನೂ ಪಡೆಯಲಾರನು.

ಪ್ರಶ್ನೆ ೪.—ನಾವು ಸಂಧ್ಯಾವಂದನೆಯನ್ನು ಮಾಡುವಾಗ ಅರ್ಘ್ಯವನ್ನು ಕೊಡುವುದರ ಉದ್ದೇಶವೇನು ?

ಉತ್ತರ—ಸೂರ್ಯನು ಪ್ರತಿದಿನವೂ ತನ್ನ ಕರ್ತವ್ಯವನ್ನು ಯಾವ ಕುಂದೂ ಬಾರದಂತೆ (ತಪ್ಪದೆ) ಪೂರೈಸುತ್ತಾನೆ. ಆತನು ತನ್ನ ಏಳು ಕುದುರೆಗಳ ರಥದಲ್ಲಿ ಕುಳಿತು ವಿಶ್ವವನ್ನು ಸುತ್ತಿ ಬರುವನು. ರಾತ್ರಿ, ಹಗಲು, ಸೇರುವ ಕಾಲವು ಒಂದು ಸಂಧ್ಯಾಕಾಲ, ಹಗಲು ಅಪರಾಹ್ನ ಸೇರುವ ಸಂಧ್ಯಾಕಾಲವೊಂದು ಮತ್ತು ಹಗಲು, ರಾತ್ರಿ ಸೇರುವ ಸಂಧ್ಯಾಕಾಲವೊಂದು. ಹೀಗೆ ಈ ಮೂರು ಸಂಧ್ಯಾಕಾಲಗಳಲ್ಲಿಯೂ ರಕ್ತಬೀಜಾಸುರನ ವಂಶದ ರಾಕ್ಷಸರು ಸೂರ್ಯನ ಗತಿಯನ್ನು ತಡೆಗಟ್ಟುತ್ತಾರೆ. ಅವರನ್ನು ನಾಶ ಮಾಡುವುದಕ್ಕಾಗಿ ನಾವು ಮೂರು ಬಾರಿ ಅರ್ಘ್ಯವನ್ನು ಕೊಡಬೇಕು. ಪ್ರಥಮಾರ್ಘ್ಯದಿಂದ ರಾಕ್ಷಸರ ವಾಹನಗಳೂ, ದ್ವಿತೀಯಾರ್ಘ್ಯದಿಂದ ರಾಕ್ಷಸರ ಶಸ್ತ್ರಾಸ್ತ್ರಗಳೂ ಮೂರನೆಯದರಿಂದ ರಾಕ್ಷಸರೂ ನಾಶ ಹೊಂದುವುದಾಗಿ ಶಾಸ್ತ್ರಾಧಾರವಿದೆ. ಗಾಯತ್ರೀ ಮಂತ್ರವನ್ನುಚ್ಚರಿಸುತ್ತಾ ಕೊಟ್ಟ ಅರ್ಘ್ಯಕ್ಕೇ

ಇಷ್ಟು ಶಕ್ತಿಯಿದ್ದ ಮೇಲೆ ಆ ಗಾಯತ್ರೀ ಮಂತ್ರ ಪುನಶ್ಚರಣೆಗೆ ಇನ್ನೆಷ್ಟು ಶಕ್ತಿಯಿರಬೇಕು ? ಕಾರಣಾಂತರಗಳಿಂದ ವೇಳೆ ಮೀರಿದರೆ ಪ್ರಾಯಶ್ಚಿತ್ತವಾಗಿ ನಾಲ್ಕನೆಯ ಅರ್ಘ್ಯವನ್ನು ಕೊಡಬೇಕು. ಆದರೆ ಪ್ರಾಯಶ್ಚಿತ್ತ ವಿಧೆಯೆಂದು ಅಕಾರಣವಾಗಿಯಾಗಲಿ, ಬೇಸರಿಕೆಯಿಂದಾಗಲಿ ಕಾಲ ವಿಳಂಬ ಮಾಡಬಾರದು.

ಪ್ರಶ್ನೆ ೫.—ಭಿಕ್ಷಾಟನೆಯನ್ನು ಮಾಡಿಕೊಂಡು ವಿದ್ಯಾಭ್ಯಾಸ ಮಾಡುವುದರಿಂದ ಏನು ಪ್ರಯೋಜನ ?

ಉತ್ತರ—ಭಿಕ್ಷಾಟನೆಯಿಂದ ಅಹಂಭಾವ, ಮಮತಾಭಾವಗಳು ನಾಶಹೊಂದುತ್ತವೆ. ಭಿಕ್ಷಾಕಾಂಕ್ಷಿಯು ವಿಧೇಯನಾಗಿ ನಡೆದುಕೊಳ್ಳುವುದು ಅವಶ್ಯಕವಾಗಿರುವುದರಿಂದ ಬಾಲ್ಯದಲ್ಲಿಯೇ ವಿಧೇಯತೆ ಮೊದಲಾದ ಸದ್ಗುಣಗಳು ಮೂಡುತ್ತವೆ.

ಶಂಕರರು ಎಲ್ಲಾ ವಿಷಯಗಳನ್ನು ತಿಳಿದಿದ್ದರೂ ಸಹ ಗುರುಮುಖದಿಂದ ಅದನ್ನು ತಿಳಿಯುವ ಸಲುವಾಗಿ ಈ ರೀತಿಯಲ್ಲಿ ಪ್ರಶ್ನೆ ಮಾಡುತ್ತಿದ್ದರು. ಗುರುವಿಗೆ ವಿಧೇಯರಾಗಿ ನಡೆದುಕೊಳ್ಳುತ್ತಾ, ಭಿಕ್ಷಾಟನೆಯನ್ನು ಮಾಡುತ್ತಾ ತಮ್ಮ ವ್ಯಾಸಂಗದಲ್ಲಿಯೇ ಕಾಲಕಳೆಯುತ್ತಿದ್ದರು.

ಒಂದು ದಿನ ಶಂಕರರು ಎಂದಿನಂತೆ ಭಿಕ್ಷಾಟನೆಗೆ ಹೊರಟರು ಒಂದಾನೊಂದು ಮನೆಯ ಮುಂದೆ ನಿಂತು “ ಭವತೀ, ಭಿಕ್ಷಾಂ ದೇಹಿ ” (ಪೂಜ್ಯಳೇ, ಭಿಕ್ಷೆಯನ್ನು ನೀಡು) ಎಂದು ಕೂಗಿದರು. ಆ ಮನೆಯಲ್ಲಿದ್ದ ಗೃಹಿಣಿಯು ಈ ಮಾತನ್ನು ಕೇಳಿದಳು. ಆಕೆ ಕಡುಬಡವಳು. ಮನೆಗೆ ಬಂದವರನ್ನು “ ಇಲ್ಲ ಹೋಗು ” ಎಂದು ಹೇಳಿ ಕಳುಹಿಸುವುದಕ್ಕೆ ಮನಸ್ಸು ಬರಲಿಲ್ಲ. ಮನೆಯಲ್ಲಿ ಏನೂ ಇಲ್ಲ. ಏನು ಮಾಡಿಯಾಳು ? ಮನೆಯಲ್ಲೆಲ್ಲಾ ಹುಡುಕಲು ಒಂದು ಒಣಗಿದ ನೆಲ್ಲೀಕಾಯಿಯು

ಸಿಕ್ಕಿತು. ಆಕೆ ಅದನ್ನು ಕೊಡಲು ಸಂಕೋಚಪಟ್ಟರೂ ಅದನ್ನೇ ಭಕ್ತಿಯಿಂದ ತಂದು ನೀಡಿದಳು. ಆಗ ಆಕೆಯ ಕಣ್ಣುಗಳಲ್ಲಿ ನೀರು ಉದುರುತ್ತಿದ್ದುವು, ತನ್ನ ಬಡತನಕ್ಕಾಗಿ ಆಕೆ ಒಳಗೊಳಗೇ ಮಿಡುಕು ತ್ತಿದ್ದಳು.

ಆ ಬಡ ಗೃಹಿಣಿಯ ಸ್ಥಿತಿಯನ್ನು ಕಂಡು ಬಾಲಶಂಕರರ ಮನಸ್ಸು ಕರಗಿತು. ಕರುಣಾಮೂರ್ತಿಯಲ್ಲವೇ ಶಂಕರ! ಅವರು ಆ ಗೃಹಿಣಿಯ ದಾರಿದ್ರ್ಯವನ್ನು ಕಳೆಯುವುದಾಗಿ ಮನಸ್ಸು ಮಾಡಿದರು. ಲಕ್ಷ್ಮೀದೇವಿ ಯನ್ನು ಕುರಿತು ಸ್ತುತಿಸಿದರು. ಗಾಯತ್ರೀ ಮಂತ್ರವನ್ನು ಜಪಿಸಿ, ಜಪಿಸಿ ಸಿದ್ಧಿಹೊಂದಿದ್ದ ಶಂಕರರು ಕೂಗುತ್ತಲೇ ಲಕ್ಷ್ಮಿಯು ಓಡಿ ಬಂದಳು! ಪ್ರತ್ಯಕ್ಷಳಾದಳು. ಆಗ ಅವರಿಗೆ ನಡೆದ ವಾಗ್ವಾದವನ್ನು ಸ್ವಲ್ಪ ಕೇಳೋಣ!

ಲಕ್ಷ್ಮಿ–ವಟು ಶಂಕರ! ನನ್ನನ್ನು ಕರೆದೆಯಲ್ಲ! ನನ್ನಿಂದೇನಾಗ ಬೇಕು?

ಶಂಕರ–ಈ ಬಡ ಗೃಹಿಣಿಯ ದಾರಿದ್ರ್ಯವು ನಿನ್ನ ಕೃಪೆಯಿಂದ ಈಗಲೇ ಕೊನೆಗಾಣಬೇಕು.

ಲಕ್ಷ್ಮಿ-ಅದು ಸಾಧ್ಯವಿಲ್ಲ. ಈಕೆ ಈ ಜನ್ಮದಲ್ಲಿ ಬಡವಳಾಗಿಯೇ ಇರಬೇಕು. ಹಿಂದಿನ ಜನ್ಮದಲ್ಲಿ ಈಕೆಯು ಯಾವ ದಾನಧರ್ಮಗಳನ್ನು ಮಾಡಿಲ್ಲ. ದಾನ-ಧರ್ಮಗಳನ್ನು ಮಾಡದಿರುವವರು ದರಿದ್ರರಾಗಿಯೇ ತಮ್ಮ ಕಾಲವನ್ನು ಕಳೆಯಬೇಕು. ಪ್ರಾರಬ್ಧವನ್ನು ಅನುಭವಿಸದೆಯೆ ಕಳೆದುಕೊಳ್ಳಲಾಗುವುದಿಲ್ಲ. "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಎಂದು ಶಾಸ್ತ್ರವೇ ಹೇಳಿದೆ.

ಶಂಕರ — ಅದಾನ (ದಾನ ಮಾಡದಿರುವ) ದೋಷ ದಿಂದ ದಾರಿದ್ರ್ಯತೆಯಲ್ಲವೇ! ಈಕೆಯು ಈಗ ಭಕ್ತಿಯಿಂದಲ




ವಟು ಶಂಕರರು ಕನಕಾಮಲಕ ವೃಷ್ಟಿ ಮಾಡಿಸಿದುದು

ಪೂರ್ಣ ಮನಸ್ಸಿನಿಂದಲೂ ನನಗೆ ದಾನ ಮಾಡಿದ್ದಾಳೆ. ಇದರಿಂದ ಈಕೆಯ ಅದಾನ (ದಾನ ಮಾಡದಿರುವ) ದೋಷವು ಪರಿಹಾರ ಹೊಂದಿದ ಹಾಗಾಯಿತು. ಕೃಪೆಮಾಡಿ ನನ್ನ ಪ್ರಾರ್ಥನೆಯನ್ನು ಅಂಗೀಕರಿಸಿ ಈಕೆಗೆ ಸಂಪತ್ತನ್ನು ಕರುಣಿಸು.

ಲಕ್ಷ್ಮಿ-ಈ ದಾನಕ್ಕೆ ಫಲವಿಲ್ಲದೆಯಿಲ್ಲ. ಈಕೆ ಮುಂದಿನ ಜನ್ಮದಲ್ಲಿ ಐಶ್ವರ್ಯವಂತಳಾಗಿ ಮೆರೆಯುತ್ತಾಳೆ. ಈ ಜನ್ಮದಲ್ಲಿ ಮಾಡಿದ ಪುಣ್ಯಕ್ಕೆ ಮುಂದಿನ ಜನ್ಮದಲ್ಲಿ ಫಲ, ಈ ಜನ್ಮದಲ್ಲಿಯಲ್ಲ.

ಶಂಕರ-ತಾಯೇ! ನಾನು ಕಟುವಾಗಿ ಮಾತನಾಡುತ್ತೇನೆಂದು ಕೋಪಗೊಳ್ಳಬೇಡ. ಪಾಪ ಪುಣ್ಯಗಳು ಹೆಚ್ಚಾದಲ್ಲಿ ಆ ಜನ್ಮದ ಫಲ ಆ ಜನ್ಮದಲ್ಲಿಯೇ ಉಂಟಾಗುತ್ತದೆ.

ತ್ರಿಭಿರ್ವರ್ಷೈಸ್ತ್ರಿಭಿರ್ಮಾಸೈ ಸ್ತ್ರಿಭಿರ್ಪಕ್ಷೈ ಸ್ತ್ರಿಭಿರ್ದಿನೈಃ ।
ಅತ್ಯುತ್ಕಟೈಃ ಪುಣ್ಯ ಪಾಪೈಃ ಇಹೈವ ಫಲಮಶ್ನುತೇ ॥

(ಹೆಚ್ಚಾದ ಪಾಪ-ಪುಣ್ಯಗಳ ಫಲವು, ಮೂರು ವರ್ಷ, ಮೂರು ತಿಂಗಳು, ಮೂರು ಪಕ್ಷ ಅಥವಾ ಮೂರು ದಿನಗಳಲ್ಲಿ ಈ ಜನ್ಮದಲ್ಲಿಯೇ ಅನುಭವಿಸಲ್ಪಡುತ್ತದೆ)

ಶಾಸ್ತ್ರವು ಹೀಗಿರುವುದು. ಅದು ಅಂತಿರಲಿ. ಅಂದು ಕುಚೇಲನಿಗೆ ಒಲಿದೆಯಲ್ಲ, ಯಾವ ಜನ್ಮದಲ್ಲಿ ಮಾಡಿದ ಪುಣ್ಯಕ್ಕಾಗಿ ಒಲಿದೆ ತಾಯೇ! ನೀನು ಯಾವ ರೀತಿಯಲ್ಲಿ ಕುಚೇಲನ ವಿಷಯದಲ್ಲಿ ಕೃಪೆ ತೋರಿದೆಯೋ ಅದೇ ಪ್ರಕಾರ ಈ ತಾಯಿಯ ವಿಷಯದಲ್ಲಿಯೂ ಕೃಪೆ ಮಾಡು. ಇದು ನನ್ನ ವಿಶೇಷ ಬೇಡಿಕೆ.

ಲಕ್ಷ್ಮಿ-ಶಂಕರ! ನಿನ್ನ ಮುಂದೆ ನನ್ನ ಮಾತು ಏನೂ ಸಾಗದು. ವಾದ ಮಾಡುವುದಕ್ಕಾಗಿಯೇ ಜನ್ಮತಾಳಿದ ನಿನ್ನೊಡನೆ, ಸಾಕ್ಷಾತ್ ಪರ

ಶಿವನಾದ ನಿನ್ನೊಡನೆ ವಾದ ಮಾಡಬಲ್ಲವರಾರು ! ನಿನ್ನ ಇಚ್ಛೆಯಂತೆ, ಈಕೆಯ ದಾರಿದ್ರ್ಯವು ಇಂದಿನಿಂದಲೇ ನಾಶವಾಗುವುದು.

ಲಕ್ಷ್ಮಿಯು ಈ ರೀತಿ ನುಡಿದು, ಅಂತರ್ಧಾನಳಾದಳು. ಅದೇ ನಿಮಿಷದಲ್ಲಿ ಆ ಮನೆಯಲ್ಲಿ ಕನಕಾಮಲಕದ (ಬಂಗಾರದ ನೆಲ್ಲೀಕಾಯಿ ಗಳ) ಮಳೆಯೇ ಸುರಿಯಿತು. ಆ ಗೃಹಿಣಿಯ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಆಕೆಯು ಶಂಕರನನ್ನು ಬಹುವಾಗಿ ಕೊಂಡಾಡಿ ದಳು.

ಶಂಕರರು ತಮ್ಮ ಎಳನೆಯ ವಯಸ್ಸಿನವರೆವಿಗೂ ಗುರುಕುಲ ದಲ್ಲಿಯೇ ಇದ್ದು ಗುರುವಿನ ಅನುಗ್ರಹವನ್ನು ಸಂಪಾದಿಸಿದರು. ವೇದ ವೇದಾಂಗಗಳನ್ನು ಅರ್ಥಸಹಿತ ತಿಳಿಯುವುದರಲ್ಲಿ ವಟುವಿನ ಸಾಮರ್ಥ್ಯ ಕಂಡು, ಗುರುಗಳೇ ಆಶ್ಚರ್ಯಪಡುತ್ತಿದ್ದರೆಂದಮೇಲೆ, ಬೇರೆಯವರ ಮಾತೇನು ? ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳೆಂಬ ನಾಲ್ಕುವೇದಗಳನ್ನೂ ತರ್ಕ, ವ್ಯಾಕರಣ, ಛಂದಸ್, ಮೀಮಾಂಸ, ಜ್ಯೋತಿಷ್ಯ ಮತ್ತು ವೈದ್ಯಶಾಸ್ತ್ರಗಳೆಂಬ ಆರು ವೇದಾಂಗಗಳನ್ನೂ ಎಲ್ಲ ಉಪನಿಷತ್ತುಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಿದರು ; ಗುರುವಿಗೆ ಸಮನಾದ ಪಾಂಡಿತ್ಯವನ್ನು ಪಡೆದರು.

"ಗುರುವಿಲ್ಲದೆ ಯಾವ ವಿದ್ಯೆಯೂ ಕೈಗೂಡುವುದಿಲ್ಲ" ಎಂಬು ದನ್ನು ಲೋಕಕ್ಕೆ ತಿಳಿಸುವ ಸಲುವಾಗಿ, ಶಂಕರರು ಗುರುವಿನ ಬಳಿ ಯಲ್ಲಿಯೇ ಇದ್ದು, ಅವರ ಸೇವೆಯನ್ನು ಮಾಡುತ್ತಾ, ವಿದ್ಯಾಭ್ಯಾಸ, ವೇದಾಭ್ಯಾಸಗಳನ್ನು ಮುಗಿಸಿದರು. ಕೊನೆಯಲ್ಲಿ, ಗುರುವಿನ ಅಪ್ಪಣೆ ಯನ್ನು ಪಡೆದು, ತಮ್ಮ ಮನೆಗೆ ಬಂದರು. ತಾಯಿಯ ಸಂದರ್ಶನ ವನ್ನು ಪಡೆದು ತಾವೂ ಸಂತೋಷಪಟ್ಟರು, ತಾಯಿಗೂ ಸಂತೋಷ ವನ್ನು ಉಂಟುಮಾಡಿದರು.

## ಪ್ರಕರಣ ೫.

## ಸಂನ್ಯಾಸ ಸ್ವೀಕಾರ

ಗುರುಕುಲದಿಂದ ಹಿಂತಿರುಗಿದ ಶಂಕರರು, ತಾಯಿಯ ಸೇವೆಯಲ್ಲಿ ನಿರತರಾಗಿ ಕೆಲವು ದಿವಸ ಕಳೆದರು. ಆರ್ಯಾಂಬೆಗೆ ಶಂಕರರನ್ನು ಕಂಡು ಆನಂದಿಸುವುದೇ ಒಂದು ಕೆಲಸವಾಗಿ ಹೋಗಿತ್ತು.

ಆರ್ಯಾಂಬೆಯು ಒಂದು ದಿವಸ ನದಿಗೆ ಸ್ನಾನಕ್ಕಾಗಿ ಹೋಗಿ ಹಿಂತಿರುಗಿ ಬರುವಾಗ ಬಿಸಿಲಿನ ಬೇಗೆಯನ್ನು ತಡೆಯಲಾರದೆ ತಳಮಳಿಸಿದಳು. ಜೊತೆಯಲ್ಲೇ ಬರುತ್ತಿದ್ದ ಶಂಕರರನ್ನು ಕುರಿತು "ಶಂಕರಾ ! ನನಗೆ ವಯಸ್ಸಾಗುತ್ತ ಬಂತು. ದಿನವೂ ನದಿಯವರೆಗೆ ನಡೆದು ಹೋಗಲಾರೆ. ಈ ಬಿಸಿಲಿನಲ್ಲಿ ನನ್ನ ಕಾಲುಗಳು ಸುಟ್ಟು ಹೋಗುತ್ತಿವೆ" ಎಂದಳು. ತಾಯಿಯನ್ನು ಮನೆಗೆ ಕರೆತಂದುಬಿಟ್ಟು, ಶಂಕರರು ಪುನಃ ನದಿಯ ತೀರಕ್ಕೆ ಹೋದರು. ಅಲ್ಲಿ ಪೂರ್ಣ ಪ್ರವಾಹದಿಂದ ಕೂಡಿ ಹರಿಯುತ್ತಿದ್ದ ಪೂರ್ಣಾ ನದಿಯನ್ನು ಸ್ತುತಿಸಿದರು "ನದ್ಯಭಿಮಾನ ದೇವತೆಯೇ ! ಅಂದು ಭಗೀರಥನ ಪ್ರಾರ್ಥನೆಯನ್ನನುಸರಿಸಿ ಗಂಗೆಯು ದೇವಲೋಕದಿಂದಿಳಿದು ಭೂಲೋಕಕ್ಕೆ ಬರಲಿಲ್ಲವೇ ? ಹಾಗೆಯೇ ಪರೋಪಕಾರವನ್ನೇ ಧ್ಯೇಯವಾಗಿಟ್ಟುಕೊಂಡಿರುವ ನೀನು ಗ್ರಾಮದ ಸನಿಹದಲ್ಲಿಯೇ ಹರಿಯುಂತೆ ಕೃಪೆ ಮಾಡು" ಎಂದು ಪ್ರಾರ್ಥಿಸಿ ಮನೆಗೆ ಬಂದರು.

ಮಾರನೆ ಬೆಳಗ್ಗೆ ಎದ್ದು ನೋಡುವಾಗ, ಅದುವರೆವಿಗೂ ದೂರದಲ್ಲಿ ಹರಿಯುತ್ತಿದ್ದ ಪೂರ್ಣಾ ನದಿಯು ಶಂಕರರ ಮನೆಯ ಹಿಂಭಾಗದಲ್ಲಿ ಹರಿಯುತ್ತಿತ್ತು. ಈ ಆಶ್ಚರ್ಯವನ್ನು ಕಂಡ ಜನರೆಲ್ಲರೂ 'ಶಂಕರರು ಸಾಕ್ಷಾತ್ ಶಂಕರನ ಅವತಾರವೇ' ಎಂದು ಹೊಗಳತೊಡಗಿದರು.

ಶಂಕರರ ಮಹಿಮೆಯನ್ನು ಕೇಳಿ ಅನೇಕ ಜನರು ಅವರ ದರ್ಶನಕ್ಕಾಗಿ ಬಂದು ಹೋಗುತ್ತಿದ್ದರು. ಒಮ್ಮೆ ಕೇರಳ ದೇಶದ ರಾಜನಾದವನು ತನ್ನ ಆಸ್ಥಾನಕ್ಕೆ ಬರುವಂತೆ ಶಂಕರರಿಗೆ ಹೇಳಿಕಳುಹಿಸಿದನು. ಶಂಕರರು ಅಲ್ಲಿಗೆ ಹೋಗುವುದಕ್ಕೆ ನಿರಾಕರಿಸಿದರು. ರಾಜನೇ ಪರಿವಾರ ಸಮೇತನಾಗಿ ಕಾಲಟಿಗೆ ಬಂದು, ತಾನು ತಂದಿದ್ದ ನಗನಾಣ್ಯಗಳನ್ನು ಕಾಣಿಕೆಯಾಗಿ ಒಪ್ಪಿಸಿದನು. "ಇದನ್ನು ಸ್ವೀಕರಿಸಿ ನನ್ನನ್ನು ಪುನೀತನನ್ನಾಗಿಮಾಡಿ. ಮಕ್ಕಳಿಲ್ಲದ ನನಗೆ ಪುತ್ರಸಂತಾನವಾಗುವಂತೆ ಅನುಗ್ರಹಿಸಿ ಕಾಪಾಡಬೇಕು" ಎಂದು ಬೇಡಿಕೊಂಡನು. ಶಂಕರರಿಗೆ ಆ ನಗ-ನಾಣ್ಯಗಳಲ್ಲಿ ಸ್ವಲ್ಪವೂ ಆಸೆಯಿರಲಿಲ್ಲ. ಅವುಗಳನ್ನು ಬೇಡವೆಂದರು. ಎಂಟನೇ ವಯಸ್ಸಿನಲ್ಲಿಯೇ ನಮ್ಮ ಶಂಕರರಿಗೆ ಎಂತಹ ವೈರಾಗ್ಯ! ತಂದಿದ್ದ ಕಾಣಿಕೆಯನ್ನು ರಾಜನಿಗೇ ಹಿಂದಕ್ಕೆ ಕೊಟ್ಟು, ರಾಜನ ಅಪೇಕ್ಷೆಯಂತೆ ಆತನಿಗೆ ಮಗನಾಗುವಂತೆ ವರಪತ್ತರು. ಕೇರಳರಾಜನು ತಾನು ಬರೆದಿದ್ದ ಮೂರು ನಾಟಕಗಳನ್ನು ಶಂಕರರ ಮುಂದೆ ಓದಿ ಅವರ ಒಪ್ಪಿಗೆಯನ್ನು ಪಡೆದು ಹೊರಟು ಹೋದನು.

ತಾನಾಗಿ ತಾನು ಬಂದ ಐಶ್ವರ್ಯವನ್ನು ತುಚ್ಛವೆಂದು ನಿರಾಕರಿಸಿದ ಇಂತಹ ವಿರಾಗಿಗೆ ಸಂನ್ಯಾಸಿಯಾಗಬೇಕೆಂಬ ಹೆಬ್ಬಯಕೆಯು ಆದುದು ಆಶ್ಚರ್ಯವಲ್ಲ. ಶಂಕರರು ತಾವು ಸಂನ್ಯಾಸಿಯಾಗುವುದಕ್ಕೆ ತಾಯಿಯ ಅನುಮತಿಯನ್ನು ಪದೇ ಪದೇ ಕೇಳಿದ್ದರೂ ಆಕೆ ಸಮ್ಮತಿಸಿರಲಿಲ್ಲ. ಒಬ್ಬನೇ ಮಗನನ್ನು–ಅದೂ ಶಂಕರನಂತಹ ಮಗನನ್ನು ಸಂನ್ಯಾಸಿಯಾಗುವುದಕ್ಕೆ ಒಪ್ಪುತ್ತಾಳೆಯೇ ತಾಯಿ! ಆಕೆ ಒಪ್ಪಲಿಲ್ಲ. ಆದುದರಿಂದ ಶಂಕರರು, ಎಲ್ಲಕ್ಕೂ ಕಾಲಬರಬೇಕೆಂದು ಸಮಯ ಕಾಯುತ್ತಿದ್ದರು.

ಒಂದು ದಿನ ಅಗಸ್ತ್ಯರೇ ಮೊದಲಾದ ಮಹರ್ಷಿಗಳು ಶಂಕರರನ್ನು ನೋಡುವುದಕ್ಕಾಗಿ ಬಂದರು. ಶಂಕರ, ಆರ್ಯಾಂಬೆಯರು ಅವರನ್ನು ಆದರಿಸಿ ಸತ್ಕರಿಸಿದರು. ಸಾಷ್ಟಾಂಗ ನಮಸ್ಕಾರಮಾಡಿ ಅವರ ಆಶೀರ್ವಾದ ಪಡೆದರು. ಅನಂತರ ಆರ್ಯಾಂಬೆ ಅಗಸ್ತ್ಯರನ್ನು ಕುರಿತು "ಮಹರ್ಷಿಗಳೇ! ನಿಮ್ಮ ಪಾದಧೂಳಿಯು ಸೋಂಕಿದುದರಿಂದ ನಮ್ಮ ಮನೆತನವೇ ಪುನೀತವಾಯಿತು. ನಿಮ್ಮಲ್ಲಿ ಒಂದು ಅರಿಕೆಮಾಡಿ ಕೊಳ್ಳಬೇಕೆಂದಿದ್ದೇನೆ. ನಾನು ವೃದ್ಧಳಾದೆ. ಗೃಹಕೃತ್ಯಗಳನ್ನೂ, ಅತಿಥಿ ಅಭ್ಯಾಗತರ ಸೇವೆ, ಮುಂತಾದ ಗೃಹಸ್ಥ ಧರ್ಮಗಳನ್ನೂ ನಡೆಸಿ ಕೊಂಡು ಹೋಗುವುದು ಕಷ್ಟವಾಗಿದೆ. ಆದುದರಿಂದ ನಮ್ಮ ಶಂಕರನಿಗೆ ಒಂದು ಒಳ್ಳೆಯ ಕನ್ಯೆಯನ್ನು ತಂದು ಮದುವೆ ಮಾಡಬೇಕೆಂದಿದ್ದೇನೆ. ಇದಕ್ಕೆ ನೀವು ಸಮ್ಮತಿಯನ್ನು ಕೊಡಬೇಕು" ಎಂದು ಬಿನ್ನವಿಸಿದಳು.

ಅಗಸ್ತ್ಯರು ಮುಗುಳುನಗೆ ನಗುತ್ತಾ, "ಅಮ್ಮಾ ಆರ್ಯಾಂಬೆ! ಶಂಕರನಿಗೆ ಕೇವಲ ಎಂಟು ವರ್ಷಗಳ ಆಯುಸ್ಸು. ಸಂನ್ಯಾಸವನ್ನು ಸ್ವೀಕರಿಸದೆ ಮದುವೆಯಾದರೆ ಮೃತ್ಯುವಿಗೆ ಈಡಾಗಬೇಕಾದೀತು! ಶಂಕರನಿಗೂ ಸಂನ್ಯಾಸದಲ್ಲಿ ತೀವ್ರವಾದ ಆಸಕ್ತಿಯಿದೆ. ನೀನು ಅನುಮತಿಸಿದರೆ ಸಾಕೆಂದು ಕಾದಿದ್ದಾನೆ. ನೀನು ಅದಕ್ಕೆ ಒಪ್ಪಿದರೆ ಮತ್ತೆ ಎಂಟು ವರ್ಷ ಆಯುಸ್ಸು ಹೆಚ್ಚುವುದು" ಎಂದರು. ಈ ಮಾತುಗಳನ್ನು ಕೇಳಿ ಆರ್ಯಾಂಬೆಗೆ ಸಿಡಿಲುಬಡಿದಂತಾಯಿತು; ಮೂರ್ಛೆ ಹೋದಳು. ಶಂಕರರು ತಾಯಿಯನ್ನು ಉಪಚರಿಸಿದರು. ಆರ್ಯಾಂಬೆಯು ಎದ್ದು ಕುಳಿತಳು. ಅಗಸ್ತ್ಯಾದಿಗಳು ಹೊರಟುಹೋದರು.

ಶಂಕರರಿಗೆ ಎಂಟನೆಯ ವರ್ಷ ಮುಗಿಯುವ ದಿನ ಬಂತು. ಶಂಕರರು ಅಂದೂ ಸಹ ಎಂದಿನಂತೆ, ತಾಯಿಯೊಡನೆ, ಸ್ನಾನಕ್ಕಾಗಿ ಮನೆಯ ಪಕ್ಕದಲ್ಲಿಯೇ ಹರಿಯುತ್ತಿದ್ದ ಪೂರ್ಣಾನದಿಗೆ ಹೋದರು.




ಶಂಕರರ ಕಾಲನ್ನು ಮೊಸಳೆಯು ಭದ್ರವಾಗಿ ಹಿಡಿದುದು

ನೀರಿಗಿಳಿದು ಸ್ನಾನಮಾಡತೊಡಗಿದರು. ತಾಯಿಯು ಪಕ್ಕದಲ್ಲಿಯೇ ಸ್ವಲ್ಪ ದೂರದಲ್ಲಿದ್ದಳು. ಶಂಕರರು ಇದ್ದಕ್ಕಿದ್ದ ಹಾಗೆಯೇ "ಅಮ್ಮಾ!" ಎಂದು ಕಿರುಚಿದರು. ತಾಯಿಗೆ ಗಾಬರಿಯಾಯಿತು. "ಏಕೆ ಶಂಕರ! ಏನಾಯಿತು?" ಎಂದು ತಾಯಿಯು ಕೇಳಲು ಶಂಕರರು "ಅಮ್ಮಾ ಅಗಸ್ತ್ಯರು ಹೇಳಿದಂತೆ ಇಂದಿಗೆ ನನ್ನ ಆಯುಷ್ಯವು ಮುಗಿಯಿತೆಂದು ತೋರುತ್ತದೆ. ಮೊಸಳೆಯೊಂದು ನನ್ನ ಕಾಲನ್ನು ಭದ್ರವಾಗಿ ಹಿಡಿದಿದೆ. ಈಗಲಾದರೂ ನನಗೆ ಸಂನ್ಯಾಸ ಸ್ವೀಕಾರ ಮಾಡುವುದಕ್ಕೆ ಅಪ್ಪಣೆಕೊಡು. ಸಂನ್ಯಾಸವನ್ನು ಸ್ವೀಕಾರ ಮಾಡುವುದರಿಂದ ಈ ಜನ್ಮವನ್ನು ತೊರೆದು ಹೊಸ ಜನ್ಮವನ್ನು ಪಡೆದಂತೆ ಆಗುವುದು. ನನ್ನ ಆಯುಸ್ಸು ದ್ವಿಗುಣಗೊಂಡು ಇನ್ನೂ ಇಷ್ಟು ದಿನಗಳು ಭೂಮಿಯ ಮೇಲೆ ಇರಬಹುದು. ಅಮ್ಮ! ಸಂನ್ಯಾಸಕ್ಕೆ ನಿನ್ನ ಅನುಮತಿಯನ್ನು ಕೊಡು. ಮೊಸಳೆಯು ನನ್ನನ್ನು ಬಿಟ್ಟುಬಿಡುವುದು. ಈಗ ಅದರ ಎಳೆತವು ಹೆಚ್ಚಾಗಿದೆ" ಎಂದರು. ತಾಯಿಗೆ ದಿಕ್ಕೇ ತೋಚದಂತಾಯಿತು. "ಸಂನ್ಯಾಸಿಯಾದರೆ ನನ್ನಿಂದ ದೂರ ಹೊರಟುಹೋಗುತ್ತಾನೆ. ಸಂನ್ಯಾಸಿಯಾಗಲು ಒಪ್ಪದಿದ್ದರೆ ಈ ಲೋಕವನ್ನೇ ಬಿಟ್ಟು ಹೋಗುತ್ತಾನೆ. ಎಲ್ಲಿಯಾದರು ಇರಲಿ ಜೀವಂತನಾಗಿದ್ದರೆ ಸಾಕು, ಬದುಕಿದ್ದರೆ ಒಂದಿಲ್ಲ ಒಂದು ದಿವಸ ಮುಖವನ್ನಾದರೂ ನೋಡಬಹುದು." ಎಂದು ಯೋಚಿಸಿ ಆರ್ಯಾಂಬೆಯು ಸಂನ್ಯಾಸವನ್ನು ತೆಗೆದುಕೊಳ್ಳಲು ಅಪ್ಪಣೆ ಕೊಟ್ಟಳು.

ತಾಯಿಯ ಒಪ್ಪಿಗೆಯನ್ನು ಪಡೆದಿದ್ದೇ ತಡ, ಶಂಕರರು ಮನಸಾ ಸಂನ್ಯಾಸವನ್ನು ಸ್ವೀಕರಿಸಿದರು. ಮೊಸಳೆಯಿಂದ ಬಿಡಿಸಿಕೊಳ್ಳಲು ತಮ್ಮ ಕಾಲನ್ನು ಮೇಲೆ ಎಳೆದುಕೊಂಡರು. ಕಾಲು ಯಾವ ಅಡಚಣೆಯೂ ಇಲ್ಲದೆ ಸುಲಭವಾಗಿ ಮೇಲೆ ಬಂತು. ಮೊಸಳೆ ಎಲ್ಲಿ

ನನ್ನ ಜೀವನವು ಹೀಗೆ ಆಗಬಾರದೇ,

ಹೋಯಿತೋ! ಕಾಣಲಿಲ್ಲ. ಆದರೆ ನಿಮಿಷದೊಳಗೆ ಆಕಾಶದಲ್ಲಿ ಒಬ್ಬ ಗಂಧರ್ವನು ಕಣ್ಣಿಗೆ ಗೋಚರನಾದನು. ಅವನು “ಶಂಕರ, ನಿನ್ನ ಪಾದಸ್ಪರ್ಶದಿಂದ ನನ್ನ ಶಾಪವು ದೂರವಾಯಿತು. ಮೊಸಳೆಯ ರೂಪವು ಹೋಗಿ ನನ್ನ ಮೊದಲ ರೂಪವು ಬಂದಿತು. ಸಂನ್ಯಾಸ ಸ್ವೀಕಾರ ಮಾಡಿದುದರಿಂದ ನಿನ್ನ ಆಯುಷ್ಯವು ದ್ವಿಗುಣವಾಯಿತು.” ಎಂದು ಹೇಳಿ ಅಂತರ್ಧಾನನಾದನು.

ಆರ್ಯಾಂಬೆಯು ಪುತ್ರ ಮೋಹದಿಂದ ಕೂಡಿದವಳಾಗಿ “ಶಂಕರಾ! ನೀನು ಹೊರಟುಹೋದರೆ ನನ್ನ ಗತಿಯೇನು! ಹೆಂಗಸು ಗಂಡನ ಆಶ್ರಯದಲ್ಲಿ ಇರಬೇಕು. ನಾನು ನಿರ್ಭಾಗ್ಯೆ. ನನಗೆ ಆ ಭಾಗ್ಯವಿಲ್ಲ. ಗಂಡನ ಆಶ್ರಯ ತಪ್ಪಿದರೆ ಹೆಂಗಸಿಗೆ ಎರಡನೆಯ ದಾರಿ, ತನ್ನ ಮಗನನ್ನು ಆಶ್ರಯಿಸುವುದು. ಈಗ ನೀನೂ ಹೊರಟುಹೋದರೆ ನಾನು ಯಾರ ಬಳಿಯಲ್ಲಿರಲಿ. ಅಂತ್ಯಕಾಲ ಒದಗಿದಾಗ ಬಳಿಯಲ್ಲಿ ಮಗನಿಲ್ಲದಿದ್ದರೆ ಹೇಗೆ?” ಎಂದು ಪುನಃ ದುಃಖಿಸತೊಡಗಿದಳು.

ಶಂಕರರು ತಾಯಿಯನ್ನು ನಾನಾವಿಧದಲ್ಲಿ ಸಮಾಧಾನಗೊಳಿಸಿ ತಾಯಿಯ ಕೋರಿಕೆಯಂತೆ ಅಂತ್ಯಕಾಲದಲ್ಲಿ ಎಲ್ಲಿದ್ದರೂ ಸ್ಮರಿಸಿದ ಕೂಡಲೇ ಬಂದು ಮಾತೃ ಸೇವೆಯನ್ನು ಮಾಡುವುದಾಗಿ ಮಾತು ಕೊಟ್ಟರು. ಆರ್ಯಾಂಬೆಯನ್ನು ಆಪ್ತ ಬಂಧುಗಳ ಪೋಷಣೆಯಲ್ಲಿ ಬಿಟ್ಟು, ಪಿತ್ರಾರ್ಜಿತವಾದ ಆಸ್ತಿಯನ್ನು ಅವರ ವಶಕ್ಕೇ ಕೊಟ್ಟು ಶಂಕರರು ಗೃಹತ್ಯಾಗ ಮಾಡಿದರು.

ಗೃಹತ್ಯಾಗಮಾಡಿ ಕೆಲವು ದಿವಸಗಳವರೆಗೆ ಕಾಲಟಿಯಲ್ಲಿದ್ದ ಕೃಷ್ಣದೇವಾಲಯದಲ್ಲಿಯೇ ಉಳಿದುಕೊಂಡಿದ್ದರು ಒಂದು ದಿನ ಶ್ರೀಕೃಷ್ಣನು ಕನಸಿನಲ್ಲಿ ಕಾಣಿಸಿಕೊಂಡು “ಶಂಕರ! ಪೂರ್ಣಾನದಿಯ ಅಲೆಗಳ ಹೊಡೆತಕ್ಕೆ ಸಿಕ್ಕಿರುವ ನನ್ನನ್ನು ಸುರಕ್ಷಿತವಾಗಿ ಬೇರೆ ಕಡೆಯಲ್ಲಿ

ಪ್ರತಿಷ್ಠಾಪಿಸಿ ನೀನು ಮುಂದೆ ಹೊರಡು. ನರ್ಮದಾ ನದಿಯ ತೀರದಲ್ಲಿರುವ ಗುಹೆಯೊಂದರಲ್ಲಿ ಆದಿಶೇಷನ ಅಂಶೋದ್ಭವರಾದ ಗೋವಿಂದ ಭಗವತ್ಪಾದರೆಂಬ ಯತಿಶ್ರೇಷ್ಠರಿದ್ದಾರೆ. ಅವರ ಬಳಿ ನೀನು ನಿಯಮದಂತೆ ಸಂನ್ಯಾಸ ಸ್ವೀಕಾರವನ್ನು ಮಾಡು" ಎಂದು ಆಜ್ಞಾಪಿಸಿದರು.

ಶಂಕರರು ಅದರಂತೆಯೇ ನದಿಯ ಅಲೆಗಳ ಹೊಡೆತಕ್ಕೆ ಸಿಗದಿರುವ ಸುರಕ್ಷಿತವಾದ ಜಾಗದಲ್ಲಿ ಶ್ರೀಕೃಷ್ಣನ ಶಿಲಾಮೂರ್ತಿಯನ್ನು ಸ್ಥಾಪಿಸಿದರು. ಅನಂತರ ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದು, ಗೋವಿಂದ ಭಗವತ್ಪಾದರನ್ನು ಅರಸುತ್ತಾ ನರ್ಮದಾ ನದಿಯ ಕಡೆಗೆ ಪ್ರಯಾಣ ಬೆಳೆಸಿದರು

ಪ್ರಕರಣ ೬

## ಗುರ್ವನುಗ್ರಹ

ಪರಾತ್ಪರ ವಸ್ತುವಾದ ಪರಶಿವನೇ ವಿಷ್ಣುವಿಗೆ ಆತ್ಮ ತತ್ವವನ್ನು ಬೋಧಿಸಿದ ಗುರು. ವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದ ಚತುರ್ಮುಖ ಬ್ರಹ್ಮನಿಗೆ ಆ ಮಹಾವಿಷ್ಣುವೇ ಗುರುವು. ಬ್ರಹ್ಮನ ಮಾನಸ ಪುತ್ರರೇ ವಸಿಷ್ಠರು. ಆ ವಸಿಷ್ಠರು 'ಶಕ್ತಿ' ಎಂಬ ಮಗನನ್ನು ಪಡೆದರು. ಆ ಶಕ್ತಿಯ ಮಕ್ಕಳೇ ಪರಾಶರರು. ಪರಾಶರರು ವ್ಯಾಸರನ್ನು ಮಗನಾಗಿ ಪಡೆದರು. ಆ ವ್ಯಾಸರ ಪುತ್ರರಾಗಿ ಜನ್ಮ ತಾಳಿದವರು ಶುಕರು. ವಿಷ್ಣುವಿನಿಂದ ಶುಕರವರೆಗೆ, ಮಗನಿಗೆ ತಂದೆಯೇ ಗುರುವಾಗಿಯೂ ತಂದೆಗೆ ಮಗನೇ ಶಿಷ್ಯನಾಗಿಯೂ ವ್ಯವಹರಿಸಿದರು. ಪುತ್ರ ಪರಂಪರೆಯಾಗಿ ಆತ್ಮತತ್ವವು ಬೋಧಿಸಲ್ಪಟ್ಟಿತು. ಶುಕರನಂತರದಲ್ಲಿ ಅದು ಶಿಷ್ಯ ಪರಂಪರೆಯಾಗಿ ಬೋಧಿಸಲ್ಪಟ್ಟಿತು. ಶುಕಾಚಾರ್ಯರು ಪ್ರೀತಿಯ ಶಿಷ್ಯರೇ ಗೌಡಪಾದರು.

ಮಹಾ ಯಾತ್ರಿಕ ಅಂದರೆ ಶ್ರೀ ಶಂಕರಾಚಾರ್ಯರು.



ಪರಮೇಶ್ವರನ ಅಪ್ಪಣೆಯನ್ನು ಪಡೆದು, ದೇವತೆಗಳು ತಮ್ಮ ತಮ್ಮ ಅಂಶದಿಂದ ಭೂಮಿಯಲ್ಲಿ ಅವತರಿಸಿದರೆಂದು ಹಿಂದೆಯೇ ಹೇಳಿದೆಯಷ್ಟೆ! ಭಗವಾನ್ ಆದಿಶೇಷನು ಅತ್ರಿಋಷಿಯ ಮಗನಾಗಿ ಹುಟ್ಟಿ ಪತಂಜಲಿಯೆಂಬ ಹೆಸರಿನಿಂದ ಪ್ರಸಿದ್ಧನಾದನು. ಮಹಾಭಾಷ್ಯ ರಚಿಸಿದವನು ಈ ಪತಂಜಲಿಯೇ ಆಗಿದ್ದಾನೆ. ಈತನ ಸಂಸ್ಕೃತ-ವ್ಯಾಕರಣ ಶಾಸ್ತ್ರವಾದ ಆ ಮಹಾಭಾಷ್ಯವನ್ನು ಒಂದು ಸಾವಿರ ಜನ ಶಿಷ್ಯರಿಗೆ ಉಪದೇಶಿಸಿದನು.

ಒಮ್ಮೆಗೆ ಸಾವಿರ ಜನಕ್ಕೂ ಉಪದೇಶಿಸಬೇಕಾದ ಕಾರಣ, ತಾನು ತೆರೆಯ ಹಿಂದೆ ಕುಳಿತು, ಸಾವಿರ ತಲೆಯ ರೂಪವನ್ನು ಧರಿಸಿ ಒಬ್ಬೊಬ್ಬನಿಗೊಂದೊಂದು ತಲೆಯಿಂದ ಪಾಠ ಹೇಳುವುದಾಗಿ ನಿಶ್ಚಯಿಸಿದನು. ಹಾಗೆ ಪಾಠ ಹೇಳುವಾಗ ತನ್ನ ಶಿಷ್ಯರಿಗೆ ಎರಡು ನಿಯಮಗಳನ್ನು ಹಾಕಿದ್ದನು. ಪಾಠ ಹೇಳುವಾಗ ಯಾರೂ ತೆರೆಯನ್ನು ತೆಗೆಯಬಾರದೆಂದೂ, ಹಾಗೆ ಕುತೂಹಲದಿಂದ ತೆರೆಯನ್ನು ಸರಿಸಿದವರು ಸುಟ್ಟು ಬೂದಿಯಾಗುವರೆಂದೂ ಶಾಪಪತ್ತಿದ್ದನು. ಎರಡನೆಯದಾಗಿ ಪಾಠವನ್ನು ಗಮನ ಕೊಟ್ಟು ಕೇಳಬೇಕೆಂದೂ, ಹಾಗೆ ಕೇಳದೆ ಎದ್ದು ಹೊರಟುಹೋಗುವವನು ಬ್ರಹ್ಮರಾಕ್ಷಸನಾಗುವನೆಂದೂ ತಿಳಿಸಿದ್ದನು.

ಪಾಠ ನಡೆಯುತ್ತಿದ್ದಾಗ ಅವರಲ್ಲಿ ಒಬ್ಬನಿಗೆ ಆ ವ್ಯಾಕರಣವು ಹಿಡಿಸಲಿಲ್ಲ. ಇತರ ಭಾಷೆಗಳ ವ್ಯಾಕರಣವೇ ತಲೆಗೆ ಹಿಡಿಸುವುದು ಕಷ್ಟ. ಇನ್ನು ಸಂಸ್ಕೃತ ವ್ಯಾಕರಣವೆಂದರೆ ಕೇಳಬೇಕೆ ? ಬೇಸರವಾಗಿ ಅಲ್ಲಿ ಕೂಡಲಾರದೆ ಎದ್ದು ಹೊರಟು ಹೋದನು. ಅವನು ಗುರುವಿನ ಮಾತಿನಂತೆ ಬ್ರಹ್ಮರಾಕ್ಷಸನಾದನು. ಮಿಕ್ಕ ೯೯೯ ಜನರೂ 'ಒಬ್ಬರೇ ನಮ್ಮೆಲ್ಲರಿಗೂ ಹೇಗೆ ಪಾಠ ಹೇಳುತ್ತಾರೆ ನೋಡಬೇಕು' ಎಂಬ ಕುತೂಹಲದಿಂದ ತೆರೆಯನ್ನು ಪಕ್ಕಕ್ಕೆ ಸರಿಸಿ, ಶಾಪದಂತೆ ಬೂದಿಯಾದರು.

ತನ್ನ ಶಿಷ್ಯರ ಗತಿಯನ್ನು ಕಂಡು ಪತಂಜಲಿಯು ಬಹು ದುಃಖಿತ ನಾದನು. ಉಳಿದವನು ಬ್ರಹ್ಮರಾಕ್ಷಸನೊಬ್ಬನೇ. ಆತನು ಪತಂಜಲಿಯನ್ನು ಬೇಡಿಕೊಂಡನು. ಪತಂಜಲಿಯು ಅವನಿಗೆ ಮಹಾಭಾಷ್ಯವನು ಹೇಳಿಕೊಟ್ಟು "ಬುದ್ಧಿವಂತನಾದ ಮತ್ತು ಯೋಗ್ಯನಾದ ವಿದ್ಯಾರ್ಥಿಯೊಬ್ಬನಿಗೆ ನೀನು ಇದನ್ನು ಎಂದು ಬೋಧಿಸುತ್ತೀಯೋ ಅಂದು ನಿನಗೆ ಈ ರೂಪವು ಹೋಗುತ್ತದೆ." ಎಂದು ಶಾಪವನ್ನು ಕೊಟ್ಟನು.

ಬ್ರಹ್ಮರಾಕ್ಷಸನು ಅನೇಕ ಕಾಲದವರೆಗೆ ಕಾದುನೋಡಿದನು.ಆದರೆ ಯೋಗ್ಯನಾದ ಮತ್ತು ಬುದ್ಧಿವಂತನಾದ ವಿದ್ಯಾರ್ಥಿಯೇ ದೊರೆಯಲಿಲ್ಲ. ವಿದ್ಯಾರ್ಥಿ ದೊರೆಯುವಂತಿಲ್ಲ; ಶಾಪ ದೂರವಾಗುವಂತಿಲ್ಲ. ಹೀಗಾಯಿತು, ಆ ಬ್ರಹ್ಮರಾಕ್ಷಸನ ಪಾಡು. ಆಗ ತನ್ನ ಶಿಷ್ಯನ ಶಾಪವಿಮೋಚನೆಗಾಗಿ (ಪತಂಜಲಿಯೇ) ಆದಿಶೇಷನೇ ಜನ್ಮವೆತ್ತಿ ಬರಬೇಕಾಯಿತು; ಗುರುವೇ ಶಿಷ್ಯನಾಗಬೇಕಾಯಿತು. ಆದಿಶೇಷನು ಚಂದ್ರಶರ್ಮನೆಂಬ ಹೆಸರಿನಿಂದ ಹುಟ್ಟಿ ಬ್ರಹ್ಮರಾಕ್ಷಸನಿಂದ ಮಹಾಭಾಷ್ಯವನ್ನು ಕಲಿತನು. ತನ್ನ ಬ್ರಹ್ಮರಾಕ್ಷಸತ್ವವನ್ನು ಕಳೆದುಕೊಂಡ ಆ ಶಿಷ್ಯನು ಸಂನ್ಯಾಸವನ್ನು ಸ್ವೀಕರಿಸಿ ಗೌಡಪಾದರೆಂಬ ಹೆಸರನ್ನು ಪಡೆದನು.

ಗೌಡಪಾದರು ಸಂನ್ಯಾಸ ಸ್ವೀಕಾರಮಾಡಿದುದನ್ನು ಕೇಳಿ ಚಂದ್ರಶರ್ಮನು ಅವರಲ್ಲಿಗೆ ಹೋದನು. ಮತ್ತು "ಸ್ವಾಮೀ! ನನಗೂ ಸಂನ್ಯಾಸ ದೀಕ್ಷೆಯನ್ನು ಅನುಗ್ರಹಿಸಬೇಕು" ಎಂದು ಕೇಳಿಕೊಂಡನು. ಗೌಡಪಾದರು ಆತನಿಗೆ ಸಂನ್ಯಾಸವನ್ನು ಕೊಟ್ಟು ಅವನನ್ನು ಗೋವಿಂದ ಭಗವತ್ಪಾದ ಎಂಬ ಹೆಸರಿನಿಂದ ಕೂಗಿದರು. ಶಂಕರರು ಆದಿಶೇಷಾಂಶರಾದ ಈ ಗೋವಿಂದ ಭಗವತ್ಪಾದರನ್ನೇ ಅರಸುತ್ತಾ ಹೊರಟಿದ್ದುದು.

ಗೋವಿಂದ ಭಗವತ್ಪಾದರು ಸಂನ್ಯಾಸ ಸ್ವೀಕಾರಮಾಡಿ ಹಿಮಾಚಲ ಪ್ರಾಂತದಲ್ಲಿರುವ ಬದರಿಕಾಶ್ರಮದಲ್ಲಿ ನೆಲಸಿದ್ದರು. ಒಂದು ದಿನ

ವ್ಯಾಸರು ತಮ್ಮ ಪುತ್ರರಾದ ಶುಕರೊಡನೆ ಅಲ್ಲಿಗೆ ಬರಲು ಗೋವಿಂದ ಭಗವತ್ಪಾದರು ಅವರನ್ನು ಆದರಿಸಿದರು. ಆಗ ವ್ಯಾಸರು "ಸಾಕ್ಷಾತ್ ಪರಮೇಶ್ವರನು ವೇದಮತವನ್ನು ಉದ್ಧರಿಸುವುದಕ್ಕಾಗಿ ಭೂಲೋಕದಲ್ಲಿ, ಶಂಕರನೆಂಬ ಹೆಸರಿನಿಂದ ಅವತರಿಸುತ್ತಾನೆ. ಶಂಕರನು ಎಲ್ಲವನ್ನೂ ತಿಳಿದಿದ್ದಾಗ್ಯೂ ಮಹಾವಾಕ್ಯಗಳ ಅರ್ಥವನ್ನು ಲೋಕಸಂಗ್ರಹಾರ್ಥವಾಗಿ ಗುರುಮುಖದಿಂದ ತಿಳಿಯಬೇಕಾಗಿದೆ. ಶಂಕರನು ನಿನ್ನನ್ನು ಗುರುವಾಗಿ ಹುಡುಕಿಕೊಂಡು ಬರುತ್ತಾನೆ. ಅದಕ್ಕಾಗಿ ನೀನು ನರ್ಮದಾ ತೀರಕ್ಕೆ ಹೋಗಿ ಶಂಕರನ ಬರುವಿಕೆಯನ್ನು ಎದುರು ನೋಡುತ್ತಿರು. ಬ್ರಹ್ಮ ಸೂತ್ರಭಾಷ್ಯವನ್ನು ರಚಿಸುವವನು ಆ ಶಂಕರನೇ! ಆದುದರಿಂದ ಆತನಿಗೆ ಮಹಾವಾಕ್ಯಗಳನ್ನುಪದೇಶಿಸಿ ಇಲ್ಲಿಗೆ (ಬದರಿಕಾಶ್ರಮಕ್ಕೆ) ಕಳುಹಿಸಿಕೊಡು.

"ಯಾವ ಬಾಲಸಂನ್ಯಾಸಿಯು ಕೊಚ್ಚಿಬರುತ್ತಿರುವ ನರ್ಮದಾ ಪ್ರವಾಹವನ್ನು ತನ್ನ ಕಮಂಡಲುವಿನಲ್ಲಿ ಅಡಗಿಸುತ್ತಾನೆಯೋ ಆತನೇ ಬ್ರಹ್ಮಸೂತ್ರಭಾಷ್ಯಕಾರನಾದ ಶಂಕರನೆಂದು ತಿಳಿ" ಎಂದು ತಿಳಿಸಿ ಅಂತರ್ಧಾನರಾದರು. ವ್ಯಾಸರ ಮಾತಿನಂತೆ ಗೋವಿಂದ ಭಗವತ್ಪಾದರು ನರ್ಮದಾ ತೀರಕ್ಕೆ ಬಂದು ಅಲ್ಲಿ ಗುಹೆಯೊಂದರಲ್ಲಿ ಶಂಕರರ ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದರು.

ಗೋವಿಂದ ಭಗವತ್ಪಾದರನ್ನು ಹುಡುಕುತ್ತಾ ಹೊರಟ ಶಂಕರರು ನರ್ಮದಾ ನದಿಗೆ ಬಂದು ಸ್ನಾನಮಾಡುತ್ತಿರುವಾಗ "ಅತ್ರ ಆಚಾರ್ಯವಾನ್ ಭವ" (ಇಲ್ಲಿ ಗುರುವನ್ನು ಪಡೆಯುವವನಾಗು) ಎಂಬ ಶಬ್ದ ಕೇಳಿಸಿತು. ಶಂಕರರಿಗೆ ಆಶ್ಚರ್ಯವೂ ಸಂತೋಷವೂ ಆಯಿತು. ಆ ಶಬ್ದವನ್ನೇ ಗುರುತಾಗಿಟ್ಟುಕೊಂಡು, ಆ ದಿಕ್ಕಿನಲ್ಲಿಯೇ ಹೋಗಲು ಒಂದು ಗುಹೆಯ ಮುಂದೆ ಬಂದು ನಿಂತರು. "ನಮ್ಮ ಗುರುವರ್ಯರು ಇಲ್ಲಿಯೇ

ಇರಬೇಕು" ಎಂದು ಯೋಚಿಸಿ "ಆದಿಶೇಷಾಂಶರಾದ ಶ್ರೀ ಗೋವಿಂದ ಭಗವತ್ಪಾದರಿಗೆ ನಮುಸ್ಕರಿಸುವೆನು" ಎಂದು ಹೇಳಲು ಗೋವಿಂದ ಭಗವತ್ಪಾದರು ಹೊರಗೆ ಬಂದ ಶಂಕರರನ್ನು ಕಂಡರು. ಅವರು 'ನೀನಾರು?' ಎಂದು ಕೇಳಲು, ಶಂಕರರು 'ನಾನು ಪೃಥ್ವೀ (ಭೂಮಿ) ಅಪ್ಪು (ನೀರು) ತೇಜಸ್ಸು (ಅಗ್ನಿ) ವಾಯು, ಆಕಾಶಗಳೆಂಬ ಪಂಚಭೂತಗಳಿಂದಾದ ದೇಹವಲ್ಲ. ನಾನು, ದೇಹದೊಳಗಿದ್ದು ದೇಹದ ಆಗು ಹೋಗುಗಳನ್ನು ಅರಿಯುವ ಚೈತನ್ಯ ಸ್ವರೂಪನು" ಎಂದರು. ಭಗವತ್ಪಾದರು ಈ ಉತ್ತರವನ್ನು ಕೇಳಿ ಬಹಳ ಸಂತೋಷಪಟ್ಟರು. ಶಂಕರರಿಗೆ ಕ್ರಮುವಾದ ಸಂನ್ಯಾಸವನ್ನು ಕೊಟ್ಟು 'ಶ್ರೀಮಚ್ಛಂಕರ ಭಗವತ್ಪೂಜ್ಯಪಾದ' ಎಂಬುದಾಗಿ ಕರೆದರು.

"ಅಹಂ ಬ್ರಹ್ಮಾಸ್ಮಿ", "ಅಯಮಾತ್ಮಾ ಬ್ರಹ್ಮ" "ತತ್ತ್ವಮಸಿ" "ಪ್ರಜ್ಞಾನಂ ಬ್ರಹ್ಮ" ಎಂಬುವು ಮುಹಾವಾಕ್ಯಗಳು. ಈ ವಾಕ್ಯಗಳ ತತ್ವಾರ್ಥಗಳನ್ನು ಗೋವಿಂದ ಭಗವತ್ಪಾದರು ಶಂಕರರಿಗೆ ಬೋಧಿಸಿದರು. ಎಲ್ಲವನ್ನೂ ಮೊದಲೇ ತಿಳಿದಿದ್ದ ಶಂಕರರಿಗೆ ಇದು ಮುನನವಾಯಿತು.

"ಬ್ರಹ್ಮ" "ಆತ್ಮ" ಎಂಬುವು ಪರ್ಯಾಯ ವಾಚಕಗಳು (ಒಂದನ್ನೇ ಹೇಳುವ ಬೇರೆ ಬೇರೆ ಶಬ್ದಗಳು) ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನು ಬೇರೆ; ಈ ಬ್ರಹ್ಮನು ಬೇರೆ. ಎಲ್ಲರಲ್ಲಿಯೂ ಇರುವ ಚೈತನ್ಯ ಶಕ್ತಿಗೆ "ಬ್ರಹ್ಮ" ಎಂದು ಹೆಸರು.

"ಅಹಂ ಬ್ರಹ್ಮಾಸ್ಮಿ". ಅಹಂ = ನಾನು, ಬ್ರಹ್ಮ = ಬ್ರಹ್ಮನು ಅಸ್ಮಿ = ಆಗಿದ್ದೇನೆ. "ನಾನು" ಬ್ರಹ್ಮನಾಗಿದ್ದೇನೆ. ಎಂದರೆ 'ನಾನು' ಎಂದು ನಾವು ಯಾವುದನ್ನು ಕರೆಯುತ್ತೇವೆಯೋ ಅದೇ ಬ್ರಹ್ಮ. ಇಲ್ಲಿ ನಾನು ಎಂದರೆ ಸಾಮಾನ್ಯವಾಗಿ ಅರ್ಥವಾಗುವ ದೇಹ ಎಂದಲ್ಲ.

"ಅಯಮಾತ್ಮಾ ಬ್ರಹ್ಮ". ಅಯಂ =ಈ, ಆತ್ಮ =ಆತ್ಮವೇ ಬ್ರಹ್ಮ = ಬ್ರಹ್ಮವು. ಈ ಆತ್ಮವೇ ಬ್ರಹ್ಮವು. ಜೀವಾತ್ಮನೆಂದು ನಾವು ಯಾವುದನ್ನು ಕರೆಯುತ್ತೇವೆಯೋ ಅದೇ ಬ್ರಹ್ಮ ವಸ್ತುವು; ಸಚ್ಚಿದಾನಂದ ರೂಪವಾದ ಬ್ರಹ್ಮ ವಸ್ತುವು. ಇದರಿಂದ ಜೀವಾತ್ಮ ಪರಮಾತ್ಮರು ಒಂದೇ ಎಂಬ ಅರ್ಥವಾಯಿತು.

"ತತ್ತ್ವಮಸಿ". ತತ್ = ಅದು, ತ್ವಮ್=ನೀನು. ಅಸಿ = ಆಗಿದ್ದೀಯ. 'ಅದು' ನೀನಾಗಿದ್ದೀಯ. ನೀನೇ 'ಅದು' ಆಗಿದ್ದೀಯ. ಇಲ್ಲಿ 'ಅದು' ಎಂದರೆ 'ಬ್ರಹ್ಮ' ಎಂಬ ಅರ್ಥ. ನೀನೇ ಬ್ರಹ್ಮ ಸ್ವರೂಪನು. ಬ್ರಹ್ಮ ಎಂಬುದು ಬೇರೆ ಇದೆ, ನಾನು ಆ ಬ್ರಹ್ಮನಾಗಬೇಕು ಎಂಬುದಿಲ್ಲ. ನಾನು 'ಬ್ರಹ್ಮ'ನೇ ಆಗಿದ್ದೇನೆ. ಆದರೆ ಇದನ್ನು ತಿಳಿಯಬೇಕಾದರೆ 'ಜ್ಞಾನ'ವನ್ನು ಹೊಂದಬೇಕು. ಅದಕ್ಕೆ ಮೋಹ ನಾಶವಾಗಬೇಕು. ಜ್ಞಾನಿಯಾದವನು, (ಇದನ್ನು ತಿಳಿದವನು) ಮುಕ್ತನಾದಂತೆಯೇ.

'ಪ್ರಜ್ಞಾನಂ ಬ್ರಹ್ಮ' ಪ್ರಜ್ಞಾನಂ-ಅರಿವು, ಬ್ರಹ್ಮ-ಬ್ರಹ್ಮ; ಜ್ಞಾನವೇ ಬ್ರಹ್ಮ ಸ್ವರೂಪವು. "ಬ್ರಹ್ಮ ಸತ್ಯ ಜಗನ್ಮಿಥ್ಯಾ" ಪರಮಾತ್ಮ ಸ್ವರೂಪನಾದ ಬ್ರಹ್ಮವೊಂದು ಸತ್ಯ. ಜಗತ್ತೇ ಮೊದಲಾದ ಮಿಕ್ಕೆಲ್ಲವೂ ಸುಳ್ಳು, ಕೇವಲ ತೋರಿಕೆಯವು. ದೇಹವು ನಾನಲ್ಲ; "ನಾನು" ಶುದ್ಧ ಜ್ಞಾನರೂಪನಾದ ಚೈತನ್ಯನು. 'ನನಗೆ ಈಗ ಬೇಸರವಾಗಿದೆ, ನನಗೆ ಈಗ ಸಂತೋಷವಾಗಿದೆ' ಎಂಬುದಾಗಿ ತಿಳಿಯುವ ಅರಿವೇ ಆತ್ಮನು.

ಎಂಬ ಈ ವಿಚಾರಗಳನ್ನು ಗೋವಿಂದ ಭಗವತ್ಪಾದರು ಶಂಕರರಿಗೆ ಉಪನಿಷತ್ತುಗಳೇ ಮೊದಲಾದವುಗಳಿಂದ ಉದಾಹರಿಸಿ ಉಪದೇಶಿಸಿದರು. ಶಂಕರರು ಗುರು ಶುಶ್ರೂಷೆಯಲ್ಲಿ ನಿರತರಾಗಿ,

ಸಂನ್ಯಾಸಾಶ್ರಮದ ಎಲ್ಲ ನಿಯಮಗಳನ್ನೂ ಪರಿಪಾಲಿಸುತ್ತಾ, ಅಲ್ಲಿ ಎರಡು ವರ್ಷಗಳನ್ನು ಕಳೆದರು. ಗುರು ಕೃಪೆಯಿಂದ ಅದ್ವೈತ ತತ್ವವನ್ನು ಕರತಲಾಮಲಕದಂತೆ (ಅಂಗೈಯಲ್ಲಿರುವ ನೆಲ್ಲಿಯಕಾಯಿ ಯಂತೆ) ಸ್ಪಷ್ಟವಾಗಿ ತಿಳಿದುಕೊಂಡರು.

ಆ ವರ್ಷ ವರ್ಷ-ಋತುವಿನಲ್ಲಿ ಹೆಚ್ಚಾದ ಮಳೆಯು ಸುರಿಯಿತು. ನರ್ಮದಾನದಿಯ ಪ್ರವಾಹ ಹೆಚ್ಚಿ ಮೇರೆ ಮೀರಿತು, ನೀರು ಆಶ್ರಮದ ಒಳಭಾಗಕ್ಕೆಲ್ಲಾ ನುಗ್ಗಿತು. ಜೊತೆಯಲ್ಲಿದ್ದವರಿಂದ ಪ್ರಾರ್ಥಿಸಲ್ಪಟ್ಟ ಶಂಕರರು ತಮ್ಮ ಗುರುವನ್ನು ಸ್ಮರಿಸಿ ಕೈಯಲ್ಲಿದ್ದ ಕಮಂಡಲುವನ್ನು ಪ್ರವಾಹಕ್ಕೆ ಎದುರಾಗಿಟ್ಟರು. ಜಹ್ನು ಮಹರ್ಷಿಯು ಕೊಚ್ಚಿ ಬರುತ್ತಿರುವ ಭಾಗೀರಥಿಯನ್ನು ಸ್ವೀಕರಿಸಿದಂತೆ, ಕಮಂಡಲುವು ಪ್ರವಾಹವನ್ನು ನುಂಗಿಬಿಟ್ಟಿತು. ನದಿಯಲ್ಲಿ ಕುಡಿಯಲು ಸಹ ಒಂದು ತೊಟ್ಟು ನೀರಿಲ್ಲದಂತಾಯಿತು. ಆಗ ಶಂಕರರು ತಮ್ಮ ಕಮಂಡಲು ವನ್ನು ಸ್ವಲ್ಪ ಬಗ್ಗಿಸಿದರು. ಕೂಡಲೇ ನದಿಯು ಸಮವಾಗಿ ಹರಿಯಲು ಎಷ್ಟು ನೀರು ಬೇಕೋ ಅಷ್ಟು ಮಾತ್ರ ಕಮಂಡಲುವಿನಿಂದ ಹೊರಗೆ ಬಂದು ನದಿಯನ್ನು ಸೇರಿತು.

ಈ ಆಶ್ಚರ್ಯವನ್ನು ಕಂಡ ಗೋವಿಂದ ಭಗವತ್ಪಾದರು ವ್ಯಾಸರ ಮಾತುಗಳನ್ನು ಸ್ಮರಿಸಿಕೊಂಡರು. ಈ ಬಾಲ ಸಂನ್ಯಾಸಿಯೇ ಬ್ರಹ್ಮ ಸೂತ್ರ ಭಾಷ್ಯಕಾರನೆಂದು ನಿರ್ಧರಿಸಿ, ಶಂಕರರಿಗೆ ಬದರಿಕಾಶ್ರಮವನ್ನು ಕುರಿತು ಹೊರಡುವುದಾಗಿ ಆಜ್ಞೆಮಾಡಿದರು. ಶಂಕರರು ಗುರುವಿನ ಆಶೀರ್ವಾದವನ್ನು ಹೊಂದಿ ಮುಂದೆ ಹೊರಟರು.

ಗೋವಿಂದ ಭಗವತ್ಪಾದರ ಆಶ್ರಮವನ್ನು ಬಿಟ್ಟು ಕಾಶಿಯನ್ನು ಕುರಿತು ಪ್ರಯಾಣ ಮಾಡಿದಾಗ ಶಂಕರರಿಗೆ ಹನ್ನೊಂದು ವರ್ಷ ವಯಸ್ಸು. ಕಾಶಿಯಲ್ಲಿ ವಿಶ್ವೇಶ್ವರ ದರ್ಶನವನ್ನು ಮಾಡಿಕೊಂಡು




ಶ್ರೀ ಶಂಕರರ ಕಮಂಡಲುವು ಪ್ರವಾಹವನ್ನು ನುಂಗಿಬಿಟ್ಟಿತು

ಬದರಿಕಾಶ್ರಮವನ್ನು ಸೇರುವುದಾಗಿ ನಿಶ್ಚಯಿಸಿದರು. ಆದುದರಿಂದ ಶಂಕರರು ನೇರವಾಗಿ ಕಾಶಿಯ ಕಡೆಗೆ ಹೊರಟರು.

ಪ್ರಕರಣ ೭

## ಕಾಶಿಯಲ್ಲಿ ಶಂಕರರು

ಗುರುವಿನ ಅನುಮತಿಯನ್ನು ಪಡೆದು ಹೊರಟ ಶಂಕರರು ಕಾಲು ನಡಿಗೆಯಿಂದಲೇ ಕಾಶಿಯನ್ನು ಸೇರಿದರು. ಅಲ್ಲಿ ಹರಿಯುವ ಗಂಗಾ ನದಿಯನ್ನು ಸ್ತುತಿಸಿ ಕಾಶೀವಿಶ್ವನಾಥನ ಸಂದರ್ಶನವನ್ನು ಮಾಡಿದರು. ಆದಿನ, ಅಲ್ಲಿಗೆ ಬಂದ ಕೆಲವರೊಡನೆ ಶಾಸ್ತ್ರಜಿಜ್ಞಾಸೆಯಲ್ಲಿ ಕಾಲ ಕಳೆದರು.

ಒಂದು ದಿನ ಶಂಕರರು ಗಂಗಾನದಿಯಲ್ಲಿ ಸ್ನಾನಮಾಡಿ ವಿಶ್ವೇಶ್ವರನ ಗುಡಿಯ ಕಡೆಗೆ ಬರುತ್ತಿದ್ದರು. ಅಲ್ಲಿ ಒಬ್ಬ ವಿದ್ಯಾರ್ಥಿಯು ' ಡುಕೃಞ್‌ಕರಣೇ ' ಎಂಬ ವ್ಯಾಕರಣದ ಧಾತು ಪಾಠವನ್ನು ಎಡಬಿಡದೆ ಹೇಳುತ್ತಿದ್ದನು. ಆಗ ಶಂಕರರ ಮನಸ್ಸು ನೊಂದಿತು. ಶಂಕರರು " ಡುಕೃಞ್‌ಕರಣೇ ಎಂದು ಜಪಮಾಡುವುದರ ಬದಲು ಗೋವಿಂದನನ್ನು ಭಜಿಸಿದರೆ ಈ ಭವಸಾಗರವನ್ನು ಸುಲಭವಾಗಿ ದಾಟಬಲ್ಲೆ. ಸಾಯುವ ಕಾಲದಲ್ಲಿ ನಿನ್ನನ್ನು ಕಾಪಾಡುವುದು ಗೋವಿಂದ-ನಾಮ ಸಂಕೀರ್ತನೆಯಲ್ಲದೆ, ಈ ವ್ಯಾಕರಣ ಸೂತ್ರವು ಅಲ್ಲ. ಗೋವಿಂದನನ್ನು ಭಜಿಸು " ಎಂದು ಹೇಳಿ

ಭಜಗೋವಿಂದಂ ಭಜಗೋವಿಂದಂ,
ಭಜಗೋವಿಂದಂ ಮೂಢಮತೇ ।
ಸಂಪ್ರಾಪ್ತೇ ಸನ್ನಿಹಿತೇ ಕಾಲೇ
ನಹಿನಹಿ ರಕ್ಷತಿ " ಡುಕೃಞ್ ಕರಣೇ " ॥

ಮೊದಲಾದ ಕೆಲವು ಶ್ಲೋಕಗಳನ್ನು ಹೇಳಿದರು. (ಅನುಬಂಧ ಗನ್ನು ನೋಡಿ). ಈ ಶ್ಲೋಕಗಳನ್ನು ಕೇಳಿ ಆ ವಿದ್ಯಾರ್ಥಿಯ ಮನಸ್ಸು ಬದಲಾಯಿಸಿತು. ಶಂಕರರಿಗೆ ಅಭಿವಂದನೆಗಳನ್ನು ಸಲ್ಲಿಸಿ, ಆ ದಿನ ಮೊದಲುಗೊಂಡು ಆ ವಿದ್ಯಾರ್ಥಿಯು ಭಗವನ್ನಾಮ ಸಂಕೀರ್ತನೆಯಲ್ಲೇ ನಿರತನಾದನು.

ಈ ರೀತಿಯಲ್ಲಿರುವಾಗ ಒಂದು ದಿವಸ ವಿಷ್ಣುಶರ್ಮನೆಂಬ ಒಬ್ಬ ಬ್ರಾಹ್ಮಣನು ಶಂಕರರ ಬಳಿಗೆ ಬಂದು ನಮಸ್ಕಾರ ಮಾಡಿದನು. ಮತ್ತು "ಸ್ವಾಮಿ, ನನಗೆ ಈ ಸಂಸಾರದಲ್ಲಿ ವಿರಕ್ತಿಯುಂಟಾಗಿದೆ. ಸಂನ್ಯಾಸ ವನ್ನು ಅನುಗ್ರಹಿಸಿ ನನ್ನನ್ನು ಈ ಭವಸಾಗರದಿಂದ ದಾಟಿಸಬೇಕೆಂದು ಬೇಡಿಕೊಳ್ಳುತ್ತೇನೆ" ಎಂದು ಭಯ ಭಕ್ತಿಗಳಿಂದ ಪ್ರಾರ್ಥಿಸಿಕೊಂಡನು.

ಆತನ ವರ್ಚಸ್ಸನ್ನೂ ತೇಜಸ್ಸನ್ನೂ ಕಂಡು ತುಷ್ಟರಾದ ಶಂಕರರು ಆತನಿಗೆ ಸಂನ್ಯಾಸವನ್ನು ಕೊಟ್ಟು ತಮ್ಮ ಪಟ್ಟ ಶಿಷ್ಯರಲ್ಲಿ ಮೊದಲಿಗ ನನ್ನಾಗಿ ಮಾಡಿಕೊಂಡರು. ಶಂಕರರ ಕೃಪೆಯಿಂದ ಆತನಿಗೆ ಸನಂದನ ನೆಂದು ಹೆಸರಾಯಿತು.

ಮತ್ತೊಂದು ದಿನ ಶಂಕರರು ಗಂಗಾಸ್ನಾನಮಾಡಿ ವಿಶ್ವೇಶ್ವರ ದರ್ಶನಕ್ಕಾಗಿ ಬರುತ್ತಿರುವಾಗ ಚಂಡಾಲನೊಬ್ಬನು ಹೆಂಡದ ಗಡಿಗೆ ಹೊತ್ತು ನಾಲ್ಕು ನಾಯಿಗಳನ್ನು ಓಡಿಸಿಕೊಂಡು ಶಂಕರರ ಎದುರಿಗೆ ಬಂದನು. ಶಂಕರರು ಅವನನ್ನು ದೂರ ಹೋಗುವಂತೆ ಹೇಳಿದರು.

ಆಗ ಆ ಚಂಡಾಲ ವೇಷಧಾರಿಯು "ನೀವು ದೂರ ಹೋಗೆಂದುದು ಈ ನನ್ನ ದೇಹವನ್ನೋ? ಅಥವಾ ನನ್ನ ಆತ್ಮವನ್ನೋ? ನನ್ನ ದೇಹವು ನಿಮ್ಮ ದೇಹದಿಂದ, ಈಗಲೂ ದೂರದಲ್ಲಿಯೇ ಇದೆ. ನನ್ನ ಆತ್ಮವನ್ನು ದೂರ ಹೋಗೆಂದು ಹೇಳುವುದಾದರೆ ಅದು ಅಸಾಧ್ಯವು. ಏಕೆಂದರೆ ನನ್ನ ಆತ್ಮ, ನಿಮ್ಮ ಆತ್ಮ ಎಂದು ಒಬ್ಬರಿಗೊಂದೊಂದು ಆತ್ಮವಿಲ್ಲ. ಅದು

ಎಲ್ಲೆಲ್ಲಿಯೂ ಸರ್ವಕಾಲವಲ್ಲಿಯೂ ಸರ್ವಸ್ಥಾನದಲ್ಲಿಯೂ ಅವಿನಾಶಿಯಾಗಿರುವ ವಸ್ತು" ಎಂದನು. ಶಂಕರರಿಗೆ ಆ ಮಾತುಗಳನ್ನು ಕೇಳಿ ಆಶ್ಚರ್ಯವಾಯಿತು. ತಮ್ಮ ಗುರುವನ್ನು ನೆನೆಸಿಕೊಂಡರು.

"ಆತ್ಮ ತತ್ವವನ್ನು ತಿಳಿದವರು ಯಾರಾದರೇನು! ಯಾವ ಕುಲವಾದರೇನು! ಅವರೇ ನನ್ನ ಗುರು. ನೀವು ನನ್ನ ಗುರುಸಮಾನರು." ಎಂದು ಪುನಃ ತಲೆಯೆತ್ತಿ ನೋಡಿದಾಗ ಚಂಡಾಲನಿದ್ದ ಜಾಗದಲ್ಲಿ ಸಾಕ್ಷಾತ್ ಚಂದ್ರಮೌಳಿಯಾದ ಪರಮೇಶ್ವರನು ವಿರಾಜಮಾನವಾಗಿರುವುದನ್ನು ಶಂಕರರು ಕಂಡರು. ನಾಲ್ಕು ನಾಯಿಗಳು ನಾಲ್ಕು ವೇದಗಳಾಗಿ ಮಾರ್ಪಟ್ಟಿದ್ದುವು. ನಾಲ್ಕು ವೇದಗಳನ್ನು ನಾಲ್ಕು ನಾಯಿಗಳನ್ನಾಗಿ ಮಾಡಿಕೊಂಡು ಸಾಕ್ಷಾತ್ ವಿಶ್ವೇಶ್ವರನೇ ಚಂಡಾಲ ರೂಪದಿಂದ ಬಂದುದನ್ನು ಕಂಡ ಶಂಕರರ ಕಣ್ಣುಗಳಲ್ಲಿ ಆನಂದ ಬಾಷ್ಪವು ಸುರಿಯಿತು. ಶಂಕರರು ಮನೀಷಾ ಪಂಚಕವೆಂಬ ಐದು ಶ್ಲೋಕಗಳನ್ನು ರಚಿಸಿದುದು ಈ ಸಂದರ್ಭದಲ್ಲಿಯೇ (ಅನುಬಂಧ ೨ನ್ನು ನೋಡಿ).

ಪರಮೇಶ್ವರನು ಶಂಕರನನ್ನು ಕುರಿತು "ಶಂಕರ! ನೀನು ಇನ್ನು ಬದರಿಕಾಶ್ರಮಕ್ಕೆ ಹೋಗು. ಅಲ್ಲಿ ವ್ಯಾಸ ರಚಿತವಾದ ಬ್ರಹ್ಮಸೂತ್ರಗಳಿಗೆ ಅದ್ವೈತತತ್ವ ಬೋಧಕವಾದ ಭಾಷ್ಯವೊಂದನ್ನು ಬರೆ. ಅದು ಸರ್ವಮಾನ್ಯವಾಗುವುದು" ಎಂದು ಆಜ್ಞಾಪಿಸಿದನು.

ವಿಶ್ವೇಶ್ವರನ ಆಜ್ಞೆಯಂತೆ ಶಂಕರರು ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದರು.

## ಪ್ರಕರಣ ೮

## ವ್ಯಾಸಾನುಗ್ರಹ

ಶ್ರೀಮಚ್ಛಂಕರ ಭಗವತ್ಪಾದರುಹಿ ಮಾಚಲದ ತಪ್ಪಲಿನಲ್ಲಿರುವ ಬದರಿಕಾಶ್ರಮವನ್ನು ಸೇರಿದರು. ಅಲ್ಲಿದ್ದ ಅನೇಕ ಋಷಿಗಳು ಶಂಕರ




ನಾಯಿಗಳನ್ನು ಓಡಿಸಿಕೊಂಡು ಎದುರಿಗೆ ಬಂದ ಚಂಡಾಲನನ್ನು ಶಂಕರರು ತಡೆದುದು

ರನ್ನು ಸ್ವಾಗತಿಸಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ದಿವ್ಯಾಸನದಲ್ಲಿ ಕುಳ್ಳಿರಿಸಿದರು. ಶಂಕರರು ಅಲ್ಲಿ ಶ್ರೀಮನ್ನಾರಾಯಣನ ಮೂರ್ತಿಯನ್ನು ಕಂಡು ಆನಂದಪಟ್ಟು, ಅನೇಕ ಪ್ರಕಾರವಾಗಿ ಸ್ತುತಿಸಿದರು.

ಶಂಕರರು ವ್ಯಾಸಾಶ್ರಮದಲ್ಲಿಯೇ ವಾಸವಾಗಿದ್ದು, ಅದ್ವೈತ ಸಿದ್ಧಾಂತವನ್ನೇ ಪ್ರತಿಪಾದಿಸುವ ಬ್ರಹ್ಮಸೂತ್ರಭಾಷ್ಯವನ್ನು ಬರೆದರು. ಈ ಗ್ರಂಥಕ್ಕೆ ಶಾರೀರ ಮೀಮಾಂಸ ಸೂತ್ರಭಾಷ್ಯವೆಂದು ಹೆಸರು. ಅವರು ಇದನ್ನು ತಮ್ಮ ಶಿಷ್ಯರಿಗೂ ಮತ್ತು ಅಲ್ಲಿದ್ದ ಋಷಿಗಳಿಗೂ ಬೋಧಿಸಿದರು.

ಸನಂದನರು ಇವರ ಪಾಠಗಳನ್ನು ಮಿಕ್ಕೆಲ್ಲ ಶಿಷ್ಯರಿಗಿಂತಲೂ ಚೆನ್ನಾಗಿ ತಿಳಿದುಕೊಳ್ಳುತ್ತಿದ್ದರು. ಶಂಕರರಿಗೆ ಸನಂದನರಲ್ಲಿ ಒಂದು ವಿಧವಾದ ವಾತ್ಸಲ್ಯ; ಅವರನ್ನು ಕಂಡರೆ ಹೆಚ್ಚು ಪ್ರೀತಿ. ಬೇರೆ ಶಿಷ್ಯರಿಗೆ ಇವರನ್ನು ಕಂಡು ಅಸೂಯೆ.

ಒಂದು ದಿನ ಶಂಕರರು ಪಾತಾಳಗಂಗೆಯ ಒಂದು ದಡದಲ್ಲಿ ನಿಂತಿದ್ದರು. ಎಲ್ಲ ಶಿಷ್ಯರುಗಳೂ ಹೂವನ್ನು ಕುಯ್ದು ತರುವುದಕ್ಕಾಗಿ ಆಚೆ ದಡಕ್ಕೆ ಹೋಗಿದ್ದರು. ಸನಂದನರ ಅತಿಶಯವಾದ ಗುರು ಭಕ್ತಿಯನ್ನು ಇತರ ಶಿಷ್ಯರಿಗೆ ತಿಳಿಯಪಡಿಸುವುದಕ್ಕೆ ಇದೇ ತಕ್ಕ ಸಮಯವೆಂದು ಶಂಕರರು "ಶಿಷ್ಯರಿರಾ ! ಬೇಗ ಬನ್ನಿ" ಎಂದು ಕೂಗಿದರು. ಮಿಕ್ಕೆಲ್ಲ ಶಿಷ್ಯರೂ ಹಿಂದು ಮುಂದು ನೋಡುತ್ತಿರುವಾಗ, ಸನಂದನರು ಏನನ್ನೂ ಯೋಚಿಸದೆ "ಸದ್ಗುರುವೇ ನಮಃ. ಸದ್ಗುರುವೇ ನಮಃ" ಎಂಬುದಾಗಿ ಗುರುವನ್ನೇ ಧ್ಯಾನಿಸುತ್ತಾ ಹೊರಟೇ ಬಿಟ್ಟರು. ಅವರಿಗೆ ಅಡ್ಡವಾಗಿ ನದಿಯಿರುವುದೂ ಸ್ಮೃತಿಯಲ್ಲಿರಲಿಲ್ಲ. ತದೇಕ ಚಿತ್ತದಿಂದ ಗುರುಗಾನ ಮಾಡುತ್ತಾ ಬಂದರು. ನೆಲದ ಮೇಲೆ ನಡೆದು ಬರುವಂತೆಯೇ ನದಿಯ ಮೇಲೂ ನಡೆದು ಬಂದರು. ಏನಾಶ್ಚರ್ಯ ! ಎಲ್ಲೆಲ್ಲಿ ಸನಂದನರು

ಕಾಲಿಡುತ್ತಿದ್ದರೋ ಅಲ್ಲಲ್ಲಿ ಒಂದೊಂದು ಕಮಲದ ಹೂವು ಹುಟ್ಟಿ ಅವರ ಕಾಲುಗಳನ್ನು ಎತ್ತಿ ಹಿಡಿಯುತ್ತಿತ್ತು; ಈ ಆಶ್ಚರ್ಯವನ್ನು ಕಂಡ ಶಂಕರರು, ಪದ್ಮಗಳ ಮೇಲೆ ಪಾದವನ್ನಿಟ್ಟು ನಡೆದು ಬಂದ ಸನಂದನರಿಗೆ ಪದ್ಮಪಾದನೆಂಬ ಅಭಿದಾನವನ್ನು ಕೊಟ್ಟರು ಸನಂದನರ ಗುರುಭಕ್ತಿಯನ್ನು ಕಂಡ ಇತರ ಶಿಷ್ಯರು, ನಾಚಿ ತಮ್ಮ ಅಸೂಯೆಯನ್ನು ಬಿಟ್ಟುಬಿಟ್ಟರು.

ಆಚಾರ್ಯರು ಅಲ್ಲಿ ಒಂದೆರಡು ವರ್ಷಗಳನ್ನು ಕಳೆದರು. ಶಂಕರರಿಗೆ ಹದಿನಾರು ವರ್ಷಗಳು ತುಂಬುವುದರಲ್ಲಿದೆ, ಎನ್ನುವಾಗ ಒಂದು ದಿನ ವ್ಯಾಸರು ವೃದ್ಧ ಬ್ರಾಹ್ಮಣನ ವೇಶದಿಂದ ಬಂದು ಶಂಕರರೊಡನೆ ಶಾಸ್ತ್ರಾರ್ಥ-ವಾಗ್ವಾದಕ್ಕೆ ಕುಳಿತರು. ತಾವು ರಚಿಸಿದ ಭಾಷ್ಯದ ಮೇಲೆ ಟೀಕೆ ಮಾಡಲು ಪ್ರಾರಂಭಿಸಿದ ಆ ಬ್ರಾಹ್ಮಣನಿಗೆ ಶಂಕರರು ಎಲ್ಲ ಜಾಗಗಳಲ್ಲಿ ಸಮಾಧಾನವನ್ನು ಹೇಳತೊಡಗಿದರು. ಬ್ರಹ್ಮಸೂತ್ರಗಳನ್ನು ರಚಿಸಿದ ವ್ಯಾಸರೊಂದು ಕಡೆ; ಸಾಕ್ಷಾತ್ ಶಂಕರರೇ ಆದ, ಮತ್ತು ಆ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿದ, ಶಂಕರರೊಂದು ಕಡೆ. ಇವರಿಬ್ಬರ ವಾಗ್ವಾದವನ್ನು ಕೇಳಬೇಕೆ ? ವಾಗ್ವಾದವು ಕೊನೆ ಮೊದಲಿಲ್ಲದಂತೆ ಎಂಟು ದಿವಸಗಳವರೆಗೆ ನಡೆಯಿತು. ಶಂಕರರು ಗೆಲ್ಲಲಿಲ್ಲ; ವ್ಯಾಸರು ಸೋಲಲಿಲ್ಲ.

ಸನಂದನರು ತಮ್ಮ ಗುರುವನ್ನು ಸ್ಮರಿಸಿ ಆ ಬ್ರಾಹ್ಮಣನನ್ನು ನೋಡಿದರು. ಸಾಕ್ಷಾತ್ ವ್ಯಾಸರೇ ಇವರೆಂದು ತಿಳಿಯಿತು. ಆಗ ಸನಂದನರು

" ಶಂಕರಶ್ಶಂಕರ ಸ್ಸಾಕ್ಷಾತ್ ವ್ಯಾಸೋ ನಾರಾಯಣೋ ಹರಿಃ ।
ತಯೋರ್ವಿವಾದೇ ಸಂಪ್ರಾಪ್ತೇ ಕಿಂಕರಃ ಕಿಂಕರೋಽಸ್ಮ್ಯಹಂ ॥"

"ಶಂಕರರು ಸಾಕ್ಷಾತ್ ಶಂಕರ ರೂಪಿಗಳು; ವ್ಯಾಸರಾದರೋ ಸಾಕ್ಷಾತ್ ನಾರಾಯಣನೇ ! ಇವರಿಬ್ಬರ ವಾಗ್ವಾದವು ಪ್ರಾಪ್ತವಾದಾಗ ಕಿಂಕರ

ನಾದ ನಾನು ಏನು ಮಾಡಲಿ ? ” ಎಂದು ಹೇಳಿ ಸಾಷ್ಟಾಂಗ ನಮಸ್ಕಾರ ನ ಾಡಿದರು. ವ್ಯಾಸರು ಪ್ರಸನ್ನರಾಗಿ ತಮ್ಮ ನಿಜರೂಪವನ್ನು ತಾಳಿ ದರು. ಶಂಕರರು “ ಶಿಷ್ಯನ ಅಪರಾಧವನ್ನು ಕ್ಷಮಿಸಬೇಕು. ನನ್ನಿಂದ ಏನಾದರು ತಪ್ಪುಗಳು ಹೊರಟಿದ್ದರೆ ತಿಳಿಸಬೇಕು ” ಎಂದು ಬೇಡಿ ಕೊಂಡರು.

ವ್ಯಾಸರು “ಶಂಕರಾ, ನಿನ್ನಿಂದ ತಪ್ಪು ಹೊರಡುವುದುಂಟೆ ! ನಿನ್ನ ಈ ಭಾಷ್ಯವು ಸರ್ವೋತ್ತಮವಾದುದು. ಇದು ಆಚಂದ್ರಾರ್ಕವಾದ ಖ್ಯಾತಿಯನ್ನು ಹೊಂದಿ ಜನರನ್ನು ಸನ್ಮಾರ್ಗಗಾಮಿಗಳನ್ನಾಗಿ ಮಾಡು ತ್ತದೆ. ನೀನು ಆಸೇತು ಹಿಮಾಚಲ ಸಂಚಾರಮಾಡಿ ಜನಗಳಲ್ಲಿ ವೇಳಿ ಮತದ ಅದ್ವೈತತತ್ವವನ್ನು ಹರಡು. ಪಾಷಂಡಿಗಳನ್ನು ಖಂಡಿಸಿ ವಿಜಯಿ ಯಾಗು” ಎಂದು ಹರಸಿದರು.

ಶಂಕರರು “ ಸ್ವಾಮಿ, ಈ ಭೂಲೋಕದಲ್ಲಿ ನನ್ನ ಕೆಲಸವು ಮುಗಿಯಿತೆಂದು ಭಾವಿಸುತ್ತೇನೆ. ನನಗೆ ಹದಿನಾರು ವರ್ಷಗಳು ಮುಗಿ ಯುವುದಕ್ಕೆ ಕೇವಲ ಕೆಲವು ದಿನಸಗಳು ಉಳಿದಿವೆ. ಈ ಲೋಕವನ್ನು ಬಿಟ್ಟು ಸ್ವಧಾಮವನ್ನು ಸೇರುವುದಕ್ಕೆ ನೀವು ಅನುಮತಿಯನ್ನು ಕೊಡ ಬೇಕು ” ಎಂದು ಕೇಳಿಕೊಳ್ಳಲು ವ್ಯಾಸರು ‘ ಶಂಕರ ! ಈ ಭೂಲೋಕ ದಲ್ಲಿ ನಿನ್ನಿಂದ ಇನ್ನೂ ಎಷ್ಟೋ ಕೆಲಸಗಳಾಗಬೇಕಾಗಿದೆ. ನಿನ್ನ ಹದಿ ನಾರು ವರ್ಷ ಆಯುಸ್ಸಿನ ಜೊತೆಗೆ, ಇನ್ನೂ ಹದಿನಾರು ವರ್ಷಗಳ ಆಯು ಸ್ಸನ್ನು ನನ್ನ ಯೋಗಶಕ್ತಿಯಿಂದ ನಿನಗೆ ಕೊಡುತ್ತೇನೆ. ದೇಶವಲ್ಲೆಲ್ಲಾ ವೇದಮತವನ್ನು ಹರಡಿ, ನಾಸ್ತಿಕ ಮತಗಳನ್ನು ನಾಶಮಾಡಿ ದೇಶವನ್ನು ಉದ್ಧಾರಮಾಡು ’ ಎಂದು ಹೇಳಿ ಶಂಕರರಿಗೆ ಆಶೀರ್ವಾದ ಮಾಡಿ ತೆರಳ ದರು.




ಗುರುಗಾನ ಮಾಡುತ್ತ ಸನಂದನರು ನದಿಯ ಪರಿವೆಯಿಲ್ಲದೆ ಬರುತ್ತಿರುವುದು

## ಪ್ರಕರಣ ೯

## ಮಂಡನಮಿಶ್ರನೊಡನೆ ವಾಗ್ವಾದ

ವೇದವ್ಯಾಸರಿಂದ ಆಜ್ಞಪ್ತರಾದ ಶಂಕರರು, ದೇಶಸಂಚಾರ ಮಾಡುತ್ತ ತಮ್ಮ ಉಪದೇಶಗಳನ್ನು ಸಾರುವುದಾಗಿ ನಿಶ್ಚಯಿಸಿಕೊಂಡು ಶಿಷ್ಯರೊಡಗೂಡಿ ಬದರಿಕಾಶ್ರಮುವನ್ನು ಬಿಟ್ಟು ಹೊರಟರು.

ಮೊತ್ತಮೊದಲು ಗಂಗಾ ಯಮುನಾ ನದಿಗಳ ಸಂಗಮದಲ್ಲಿರುವ ಪಯಾಗ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು. ಕರ್ಮಕಾಂಡವನ್ನು ಅನುಸರಿಸುವ ಕುಮಾರಿಲಭಟ್ಟರು ಅಲ್ಲಿರುವುದಾಗಿ ತಿಳಿಯಲು ಅವರೊಡನೆ ವಾದಮಾಡುವುದಾಗಿ ನಿಶ್ಚಯಿಸಿ, ಶಂಕರರು ಆತನ ಬಳಿಗೆ ಹೋದರು. ಆಗ ಅವರು ಸುತ್ತಲೂ ಕುತ್ತಿಗೆಯವರೆಗೆ ಭತ್ತದ ಹೊಟ್ಟನ್ನು ಹರಡಿ ಅದರ ಮಧ್ಯದಲ್ಲಿ ನಿಂತುಕೊಂಡಿದ್ದರು. ಹೊಟ್ಟಿಗೆ ಬೆಂಕಿ ತಗುಲಿಸಲ್ಪಟ್ಟದ್ದಿತು. ಷಣ್ಮುಖನ ಅಂಶದಿಂದ ಹುಟ್ಟಿದವರೇ ಈ ಕುಮಾರಿಲಭಟ್ಟರು. ಇವರು ಇಂದ್ರನ ಅಂಶದಿಂದ ಜನಿಸಿದ ಸುಧನ್ವರಾಜನ ಆಸ್ಥಾನದಲ್ಲಿದ್ದರು.

ತುಷಾಗ್ನಿಯಲ್ಲಿ (ಹೊಟ್ಟಿನ ಬೆಂಕಿಯಲ್ಲಿ) ತಮ್ಮನ್ನು ತಾವೇ ಸುಟ್ಟುಕೊಳ್ಳುತ್ತಿರುವ ಆತನನ್ನು ಕಂಡು ಶಂಕರರು ಕರುಣಾಪೂರಿತರಾಗಿ "ಅಯ್ಯಾ! ಕುಮಾರಿಲಭಟ್ಟರೇ, ನಿಮಗೇಕೆ ಈ ಅವಸ್ಥೆ? ನಿಮಗೆ ಈ ಶಿಕ್ಷೆಯನ್ನು ವಿಧಿಸಿದವರು ಯಾರು? ಈ ಶಿಕ್ಷೆಯನ್ನು ಅನುಭವಿಸುವುದಕ್ಕೆ ನೀವು ಮಾಡಿದ ಅಪರಾಧವಾದರೂ ಏನು? ನಾನು ನಿಮ್ಮೊಡನೆ ಶಾಸ್ತ್ರಾರ್ಥ ವಿಚಾರ ಮಾಡುವುದಕ್ಕಾಗಿ ಬಂದೆ. ನನ್ನ ಕಮಂಡಲೋದಕದಿಂದ ನಿಮ್ಮನ್ನು ಪ್ರೋಕ್ಷಿಸಿದರೆ ನಿಮಗೆ ಮೊದಲಿನ ರೂಪವೇ ಬರುತ್ತದೆ. ಅಗ್ನಿಬಾಧೆ ಇರುವುದಿಲ್ಲ. ಅನಂತರ ನಾನು ಬರೆದಿರುವ ಭಾಷ್ಯ

ವನ್ನು ಕುರಿತು ಚರ್ಚಿಸೋಣ" ಎಂದರು.

ಆಗ, ಭಟ್ಟಪಾದರು ತಮ್ಮ ಕಥೆಯನ್ನು ಹೀಗೆ ತಿಳಿಸಿದರು:— "ನಾನು ಗುರುಮುಖದಿಂದ ವೇದ, ವೇದಾಂಗಗಳನ್ನು ಕಲಿತೆ. ನಾಸ್ತಿಕವಾದದಿಂದ ಕೂಡಿದ ಬೌದ್ಧ ಮತವನ್ನು ಖಂಡಿಸಲು ಪ್ರಯತ್ನಿಸಿದೆ. ಆ ಮತದ ತತ್ವಗಳನ್ನು ತಿಳಿಯದೆ ಆ ಮತವನ್ನು ಖಂಡಿಸುವುದಾದರೂ ಹೇಗೆ? ಅದಕ್ಕಾಗಿ, ಆ ಮತದ ಒಳ ತತ್ವಗಳನ್ನು ತಿಳಿಯುವುದಕ್ಕಾಗಿ ಬೌದ್ಧ ಭಿಕ್ಷುವಿನ ವೇಷವನ್ನು ಹಾಕಿಕೊಂಡು ಒಬ್ಬ ಬೌದ್ಧ ಗುರುವಿನ ಬಳಿಗೆ ಹೋದೆ. ಅವನಲ್ಲಿ ಬೌದ್ಧ ಮತದ ಎಲ್ಲ ವಿಷಯಗಳನ್ನೂ ತಿಳಿದೆ. ಅವರು ಶ್ರುತಿಗಳಿಗೆ ಅಪಾರ್ಥಗಳನ್ನು ಕಲ್ಪಿಸಿರುವುದನ್ನು ಕಂಡು ಬಹಳ ವ್ಯಥೆಯಾಯಿತು. ಬೌದ್ಧ ಮತವನ್ನು ಖಂಡಿಸುವುದಾಗಿ ತೀರ್ಮಾನಿಸಿ ಸುಧನ್ವರಾಜನ ಆಶ್ರಯವನ್ನು ಪಡೆದೆ.

"ಸುಧನ್ವ ರಾಜನ ಆಸ್ಥಾನದಲ್ಲಿ ನಾನು ವೇದಮತವೇ ಪ್ರಮಾಣವೆಂದೂ, ಬೌದ್ಧರು ಬೌದ್ಧ ಮತವೇ ಪ್ರಮಾಣವೆಂದೂ, ವಾದಿಸಿದೆವು. ವಾದದಲ್ಲಿ ಅವರನ್ನು ಗೆದ್ದು, ಕರ್ಮವನ್ನು ಮಾಡದಿದ್ದರೆ ಪಾಪವೆಂದು ಸಾರಿ ಕರ್ಮಕಾಂಡವನ್ನು ಉದ್ಧರಿಸಿದೆ. "ನಮ್ಮ ಮತವೇ ಪ್ರಮಾಣವೆಂದು ಹೇಳುತ್ತಾ ಯಾರು ಪರ್ವತವನ್ನು ಹತ್ತಿ ಧುಮುಕುತ್ತಾರೆಯೋ ಅವರ ಮತವೇ ಪ್ರಮಾಣವೆಂದು ಒಪ್ಪುತ್ತೇನೆ" ಎಂದು ಸುಧನ್ವ ರಾಜನು ತಿಳಿಸಿದನು. ನಾನು ಪರ್ವತಾಗ್ರವನ್ನು ಹತ್ತಿ 'ವೇದ ಮತವೇ ಪ್ರಮಾಣವಾಗಿದ್ದರೆ, ನನಗೆ ಯಾವ ಗಾಯ, ನೋವುಗಳೂ ಆಗದಿರಲಿ' ಎಂದು ಹೇಳಿ ಧುಮುಕಿದೆನು. ನನ್ನ ದೇಹಕ್ಕೆ ಗಾಯವಾಗಲಿ ಬಾಧೆಯಾಗಲಿ ಆಗಲಿಲ್ಲ. ಬೌದ್ಧರು "ಇದು ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಯನ್ನು ಕಲಿತವರು ಮಾಡುವ ಕಣ್ಣುಕಟ್ಟನಂತೆ ತೋರುವುದು. ಗಿಡಮೂಲಿಕೆಗಳ ರಸವನ್ನು ಹಚ್ಚಿಕೊಳ್ಳುವುದರಿಂದಲೂ,

ಮಣಿಮಂತ್ರಾದಿಗಳ ಉಪಯೋಗದಿಂದಲೂ, ಬೆಟ್ಟದಿಂದ ಧುಮುಕಿಯೂ ಸಹ ಪೆಟ್ಟಿಲ್ಲದಂತಿರಬಹುದು. ಕೇವಲ ಈ ಪರೀಕ್ಷೆಯಿಂದಲೇ ವೇದವು ಪ್ರಾಮಾಣ್ಯವೆಂದು ಒಪ್ಪಲಾಗುವುದಿಲ್ಲ" ಎಂದು ರಾಜನ ಬಳಿ ಹೇಳಿಕೊಂಡರು.

"ಮತ್ತೊಮ್ಮೆ ರಾಜನು ಯಾರಿಗೂ ತಿಳಿಯದಂತೆ ಒಂದು ಘಟಸರ್ಪವನ್ನು ತರಿಸಿ, ಒಂದು ಘಟದಲ್ಲಿರಿಸಿದನು. ಮತ್ತು ಅದನ್ನು ಆಸ್ಥಾನಕ್ಕೆ ತರಿಸಿ "ಈ ಗಡಿಗೆಯಲ್ಲಿ ಇರುವುದೇನೆಂದು ಹೇಳಿದವರ ಮತವೇ ಸರಿ" ಎಂದು ಹೇಳಿದನು. ಬೌದ್ಧರು ಒಂದು ವಾರ ಅವಧಿಯನ್ನು ಕೇಳಿ, ಆ ಅವಧಿಯಲ್ಲಿ ಅದರೊಳಗೆ ಏನಿದೆಯೆಂದು ಮೋಸದಿಂದ ತಿಳಿದುಕೊಂಡರು. ಅವಧಿಯು ತೀರಿದನಂತರ ಒಡ್ಡೋ ಲಗದಲ್ಲಿ ರಾಜನು 'ಇದರಲ್ಲಿ ಏನಿದೆ, ಹೇಳಿರಿ' ಎಂದು ಕೇಳಿದಾಗ ಬೌದ್ಧರು ನಿಸ್ಸಂಕೋಚವಾಗಿ 'ಸರ್ಪವಿದೆ' ಎಂದರು. ನಾನು ಸರ್ಪಶಾಯಿಯಾದ ಮಹಾವಿಷ್ಣುವಿರುವನೆಂದು ಹೇಳಿದೆ. ಘಟವನ್ನು ತೆಗೆಸಿ ನೋಡಲು ಅಲ್ಲಿ ಸರ್ಪಶಾಯಿ ವಿಷ್ಣುವಿನ ವಿಗ್ರಹವೇ ಇದ್ದುದನ್ನು ರಾಜನು ತನ್ನ ಕಣ್ಣಾರೆ ಕಂಡನು.

"ಆ ಘಟನೆಯಿಂದ ರಾಜನಿಗೆ ವೇದಮತದಲ್ಲಿ ನಂಬಿಕೆಯುಂಟಾಗಿ, ಬೌದ್ಧಮತದಲ್ಲಿ ಜುಗುಪ್ಸೆಯುಂಟಾಯಿತು. ರಾಜ್ಯದಲ್ಲಿದ್ದ ಎಲ್ಲ ಬೌದ್ಧರನ್ನೂ ಓಡಿಸಿದನು. ಹಾಗೆ ದೇಶಭ್ರಷ್ಟರಾದ ಬೌದ್ಧರಲ್ಲಿ, ನನ್ನ ಬೌದ್ಧಗುರುವೂ ಒಬ್ಬನಾಗಿದ್ದನು. ಒಂದಕ್ಷರವನ್ನು ಕಲಿಸಿದವನೂ ಸಹ ಗುರುವೇ. ಹೀಗಿರುವಾಗ ಆ ಬೌದ್ಧಗುರುವೂ ನನ್ನ ಗುರುವೇ ಅಲ್ಲವೆ? ನಾನು, ಆ ಗುರುವಿಗೆ ಅನಮಾನ ಮಾಡಿ ಗುರುದ್ರೋಹಿ ಯಾಗಿದ್ದೇನೆ. ಇದಕ್ಕೆ ಸ್ವಲ್ಪ ಸ್ವಲ್ಪವಾಗಿ ನನ್ನನ್ನು ಸುಟ್ಟುಕೊಳ್ಳು

ವುದನ್ನು ಬಿಟ್ಟು ಬೇರೆ ಪ್ರಾಯಶ್ಚಿತ್ತವೇ ಇಲ್ಲ. ಆದಕ್ಕಾಗಿ ಈ ತುಷಾಗ್ನಿಯಲ್ಲಿ ಸುಟ್ಟು ಪ್ರಾಣಬಿಡುವುದಾಗಿ ನಿಶ್ಚಯಿಸಿದ್ದೇನೆ."

ಶಂಕರರು ಕುಮಾರಿಲ ಭಟ್ಟರ ಚರಿತ್ರೆಯನ್ನು ಕೇಳಿ "ಭಟ್ಟ ಪಾದರೇ! ಯಾವುದಕ್ಕೂ ಪಶ್ಚಾತ್ತಾಪಕ್ಕಿಂತ ಮಿಗಿಲಾದ ಪ್ರಾಯಶ್ಚಿತ್ತ ಬೇಕಿಲ್ಲ. ನೀವು ಮನಃಪೂರ್ವಕವಾಗಿ ಪಶ್ಚಾತ್ತಾಪ ಪಟ್ಟಿರುವುದು. ನಿಮ್ಮನ್ನು ಪಾಪದೂರರನ್ನಾಗಿ ಮಾಡಿದೆ. ನೀವು ಇಷ್ಟಪಟ್ಟರೆ ನಿಮ್ಮನ್ನು ಬದುಕಿಸಿ ಕರ್ಮಕಾಂಡದ ವಿಷಯದಲ್ಲಿ ನಿಮ್ಮೊಡನೆ ಚರ್ಚಿಸ ಬೇಕೆಂದಿದ್ದೇನೆ" ಎಂದರು.

ಭಟ್ಟರು "ಆಚಾರ್ಯರೆ, ನಾನು, ನನ್ನ ಗುರು ದ್ರೋಹಕ್ಕೆ ಇದೇ ತಕ್ಕ ಪ್ರಾಯಶ್ಚಿತ್ತವೆಂದು ನಿಶ್ಚಯಿಸಿದ್ದೇನೆ. ರೇವಾನದಿಯ ತೀರದಲ್ಲಿ ಮಾಹಿಷ್ಮತೀ ಎಂಬ ನಗರವಿದೆ. ಅಲ್ಲಿ ಮಂಡನಮಿಶ್ರರೆಂಬ ಒಬ್ಬ ಉದ್ದಾಮ ಪಂಡಿತರಿದ್ದಾರೆ. ಹಿಮಮಿಶ್ರ ಭಟ್ಟಾಚಾರ್ಯರ ಪುತ್ರರಾದ ಅವರು ಶುದ್ಧ ಕರ್ಮಠರು; ಕರ್ಮಕಾಂಡವನ್ನು ಚೆನ್ನಾಗಿ ತಿಳಿದ ಅದ್ವಿತೀಯ ಪಂಡಿತರು. ಶಾಸ್ತ್ರಾರ್ಥ ವಿಚಾರದಲ್ಲಿ ಅವರನ್ನು ಇದುವರೆವಿಗೂ ಯಾರೂ ಗೆದ್ದಿಲ್ಲ. ವಾದದಲ್ಲಿ ಅವರನ್ನು ಅಪಜಯ ಗೊಳಿಸಿದಲ್ಲಿ ನಿಮ್ಮ ಕೀರ್ತಿ ಭಾರತದಲ್ಲೆಲ್ಲಾ ಹರಡುವುದು" ಎಂದು ಹೇಳಿದರು.

ಶಂಕರರು ಷಣ್ಮುಖಾಂಶಸಂಭೂತರಾದ ಆ ಭಟ್ಟಪಾದರಿಗೆ ಮೋಕ್ಷವನ್ನು ಅನುಗ್ರಹಿಸಿ, ಆನಂದಿತರಾಗಿ ತಮ್ಮ ಶಿಷ್ಯರೊಡನೆ ಹೊರಟರು. ರೇವಾನದಿಯ ತೀರದಲ್ಲಿರುವ ಮಾಹಿಷ್ಮತೀ ನಗರವನ್ನು ಕಾಲುನಡಿಗೆಯಿಂದಲೇ ಸೇರಿದರು. ಭಟ್ಟಪಾದರು ಹೇಳಿದಂತೆ ಯಾವ ಮನೆಯ ಮುಂದುಗಡೆ ಗಿಳಿಗಳು ಪಂಜರದಲ್ಲಿ ಕುಳಿತು ವೇದ ಪಾಠ ಗಳನ್ನು ಹೇಳುತ್ತಿರುತ್ತವೆಯೋ, ಆ ಮನೆಯೇ ಮಂಡನಮಿಶ್ರನ ಮನೆ

ಯೆಂದು ತಿಳಿದು ಅವನ ಮನೆಗೆ ಹೋದರು. ಬ್ರಹ್ಮನು ಮಂಡನ ನಾಗಿಯೂ ಸರಸ್ವತಿಯು ಉಭಯಭಾರತಿಯಾಗಿಯೂ (ಸರಸವಾಣಿ ಎಂದೂ ಕೆಲವರು ಹೇಳುತ್ತಾರೆ) ಅವತರಿಸಿದರೆಂಬ ವಿಷಯವನ್ನು ಹಿಂದೆಯೇ ತಿಳಿಸಿದೆಯಷ್ಟೆ!

ಅಂದು ಮಂಡನನ ಮನೆಯಲ್ಲಿ ಆತನ ತಂದೆಯ ಶ್ರಾದ್ಧ. ಅದಕ್ಕಾಗಿ ಮಹಾಮಹಿಮರಾದ ವೇದವ್ಯಾಸರೂ, ಜೈಮಿನಿ ಮುನಿಗಳೂ ಆಮಂತ್ರಿತರಾಗಿದ್ದರು.

ಮನೆಯ ಬಾಗಿಲು ಹಾಕಿರುವುದನ್ನು ನೋಡಿ, ಶಂಕರರು ತಮ್ಮ ಯೋಗಶಕ್ತಿಯಿಂದ ಆಕಾಶಮಾರ್ಗದಲ್ಲಿ ಹೋಗಿ ಮಂಡನನ ಮನೆಯ ಅಂಗಳದಲ್ಲಿ ಇಳಿದರು. ಹೇಳದೆ ಕೇಳದೆ ಬಂದ ಶಂಕರರನ್ನು ಕಂಡ ಮಂಡನ ಮಿಶ್ರರಿಗೆ ಕೋಪ ಬಂತು. ಆಗ ಶಂಕರರಿಗೂ ಮಂಡನ ಮಿಶ್ರರಿಗೂ, ಬಹಳ ಸ್ವಾರಸ್ಯವಾದ ಸಂಪಾದ ನಡೆಯಿತು.

ಮಂಡನ—(ಶಂಕರರನ್ನು ಬೋಳಾ ಎಂದು ಸಂಬೋಧಿಸಿ) ಬೋಳಾ! ಎಲ್ಲಿಯವರೆಗೆ?

ಶಂಕರ—ಯತಿಗಳಿಗೆ ಕುತ್ತಿಗೆಯವರೆಗೆ ಮಾತ್ರ ಬೋಳು.

ಮಂಡನ—(ಎಲ್ಲಿಯವರೆಗೆ ಹೋಗುತ್ತೀ ಎಂದು) ದಾರಿಯನ್ನು ಕೇಳಿದೆ.

ಶಂಕರ—ದಾರಿ ಏನು ಹೇಳಿತು?

ಮಂಡನ—(ಶಂಕರರನ್ನು ಕುರಿತು, ಕೋಪಗೊಂಡು) "ನಿನ್ನ ತಾಯಿ ವಿಧವೆ, ನೀನು ವಿಧವಾ ಪುತ್ರ" ಎಂದು ಹೇಳಿತು.

ಶಂಕರ—(ಶಾಂತರಾಗಿಯೇ) ದಾರಿಯು ನಿನ್ನನ್ನು ಕುರಿತಲ್ಲವೆ ಹಾಗೆ ಹೇಳಿದುದು? ನಾನು ದಾರಿಯನ್ನು ಕೇಳಲೂ ಇಲ್ಲ; ಅದ

ನನಗೆ ಉತ್ತರವನ್ನು ಕೇಳಲೂ ಇಲ್ಲ—(ಮಂಡನನೇ-ವಿಧವಾ ಪುತ್ರ ನೆಂದು ಹೇಳಿದ ಹಾಗಾಯಿತು)

ಮಂಡನ—ಅಹೋ, ಪೀತಾ ಕಿಮು ಸುರಾ [ಏನು, ಹೆಂಡವು ಕುಡಿಯಲ್ಪಟ್ಟಿತೇ? ಅಥವಾ ಹೆಂಡವು ಹಳದಿಯೇನು? ಪೀತಾ ಕಿಮು-ಎನ್ನುವ ಪದಕ್ಕೆ ಕುಡಿಯಲ್ಪಟ್ಟಿತೇ? ಅಥವಾ ಹಳದಿಯೇನು?—ಎಂಬ ಎರಡು ಅರ್ಥಗಳಾಗುವುವು.]

ಶಂಕರ—(ಎರಡನೆಯ ಅರ್ಥವನ್ನನುಸರಿಸಿ) ಹೆಂಡದ ಬಣ್ಣ ಹಳದಿಯಲ್ಲ; ಬಿಳಿ. ಅದೂ ತಿಳಿಯುವುದಿಲ್ಲವೇ?

ಮಂಡನ—ಸಂನ್ಯಾಸಿಯಾದ ನೀನು ಹೆಂಡದ ಬಣ್ಣವನ್ನು ಹೇಗೆ ತಿಳಿದೆ?

ಶಂಕರ—ನನಗೆ ಹೆಂಡದ ಬಣ್ಣ ಮಾತ್ರ ಗೊತ್ತು; ನಿನಗೆ ರುಚಿಯೂ ಸಹ ಗೊತ್ತು ಎಂದು ಕಾಣುತ್ತೆ!

ಮಂಡನ—(ಮತ್ತೂ ಕೋಪಗೊಂಡು) ಮಾಂಸ ತಿಂದ ಮತ್ತೋಜಾತನಂತೆ ಏಕೆ ಮಾತನಾಡುತ್ತೀಯೆ? [ಮತ್ತೋಜಾತ ಎಂಬ ಪದಕ್ಕೆ 'ಮದಿಸಿದವನು' ಮತ್ತು 'ನನ್ನ ಮಗ' ಎಂಬ ಎರಡರ್ಥಗಳುಂಟು]

ಶಂಕರ—(ಮತ್ತೋಜಾತ ಎನ್ನುವುದಕ್ಕೆ 'ನನ್ನ ಮಗ' ಎಂಬ ಎರಡನೆಯ ಅರ್ಥವನ್ನು ಗ್ರಹಿಸಿ) ಏನು? ನಾನು ಮಾಂಸ ತಿಂದ ನಿನ್ನ ಮಗನಂತೆ ಮಾತನಾಡುತ್ತೇನೆಯೇ? ಈಗ ಚೆನ್ನಾಯಿತು. ಹೆಂಡ ಕುಡಿಯುವನ ಮಗ ಮಾಂಸ ತಿನ್ನುವವನೇ ಸರಿ!

ಈ ರೀತಿಯಾಗಿ ತನ್ನ ಎಲ್ಲ ಪ್ರಶ್ನೆಗಳಿಗೂ ಶಂಕರರು ಚಮತ್ಕಾರವಾದ ಉತ್ತರಗಳನ್ನು ಕೊಟ್ಟದ್ದನ್ನು ಕೇಳಿ, ಮಂಡನನು ಕೆರಳಿದನು. ವೇದವ್ಯಾಸರೂ, ಜೈಮಿನಿಗಳೂ ಅವನನ್ನು ಸಮಾಧಾನಗೊಳಿಸಿದರು. ಮಂಡನನು ಶಂಕರರನ್ನೂ ಆಮಂತ್ರಿಸಿದನು. (ಭೋಜನಕ್ಕೆ

ಕರೆದನು) ಆಗ ಶಂಕರರು "ನಾನು ಊಟದ ಭಿಕ್ಷೆಗಾಗಿ ಬರಲಿಲ್ಲ, ವಾದ-ಭಿಕ್ಷೆಗಾಗಿ ಬಂದಿದ್ದೇನೆ. ಭೋಜನಾನಂತರದಲ್ಲಿ ನನ್ನೊಡನೆ ವಾದಮಾಡುವುದಾಗಿ ವಾಗ್ದಾನ ಮಾಡಿದರೆ ನಿನ್ನ ಆಮಂತ್ರಣವನ್ನು ಒಪ್ಪಿಕೊಳ್ಳುತ್ತೇನೆ" ಎಂದರು. ಮಂಡನನು ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಆ ದಿನ ಶ್ರಾದ್ಧಕರ್ಮವು ಕ್ರಮವಾಗಿ ನೆರವೇರಿತು. ವಾದಕ್ಕೆ ಸಮಯವನ್ನೂ ನಿಶ್ಚಯಮಾಡಿಕೊಂಡರು.

ಗೊತ್ತಾದ ಸಮಯದಲ್ಲಿ ಇಬ್ಬರೂ-ಶಂಕರ ಮಂಡನರು-ವಾಗ್ವಾದಕ್ಕೆ ಪ್ರಾರಂಭಿಸಿದರು. ಶಂಕರರು—"ನಾನು ವಾದದಲ್ಲಿ ಸೋತರೆ, ಕಾಷಾಯ (ಕಾವಿಬಟ್ಟೆ) ಕಮಂಡಲುಗಳನ್ನು ಕಿತ್ತೊಗೆದು ಸಂನ್ಯಾಸವನ್ನು ತ್ಯಜಿಸಿ, ಗೃಹಸ್ಥಾಶ್ರಮವನ್ನು ಸ್ವೀಕರಿಸುತ್ತೇನೆ" ಎಂದು ಪ್ರತಿಜ್ಞೆ ಮಾಡಿದರು. ಮಂಡನನೂ ಸಹ "ನಾನು ತರ್ಕದಲ್ಲಿ ಗೆಲ್ಲಲಾರದೆ ಹೋದರೆ, ಗೃಹಸ್ಥಾಶ್ರಮವನ್ನು ತ್ಯಜಿಸಿ, ಕಾಷಾಯ ಕಮಂಡಲುಗಳನ್ನು ಸ್ವೀಕರಿಸಿ ಸಂನ್ಯಾಸಿಯಾಗುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು.

ವಾದಿಸುವುದಕ್ಕಾಗಿಯೇ ಜನ್ಮ ತಾಳಿದ ಶಂಕರರೊಂದು ಕಡೆ. ಸಾಕ್ಷಾತ್ ಸರಸ್ವತಿಯನ್ನೇ ಕೈಹಿಡಿದ ಮಂಡನಮಿಶ್ರನೊಂದು ಕಡೆ. ವಾದವು ಬರಬರುತ್ತಾ ಬಿರುಸಾಗತೊಡಗಿತು. ಕರ್ಮದಿಂದಲೇ ಮೋಕ್ಷವೆಂದು ಮಂಡನನೂ, ಜ್ಞಾನನಿಂದಲೇ ಮುಕ್ತಿಯೆಂದು ಶಂಕರರೂ ವಾದಿಸಿದರು. ಇಬ್ಬರೂ, ವೇದ, ಶ್ರುತಿ, ಉಪನಿಷತ್ತು, ಭಗವದ್ಗೀತೆ ಮೊದಲಾದ ಗ್ರಂಥಗಳಿಂದ ವಾಕ್ಯಗಳನ್ನು ಉದಾಹರಿಸಿ ವಾದಮಾಡಿದರು. ಅನೇಕ ಯುಕ್ತಿವಾದಗಳನ್ನು ಮಾಡಿದರೂ, ಯಾರ ಕೈಯೂ ಮೇಲಾಗದಂತಾಗಿ ಯಾರು ಸೋಲಬಹುದು, ಯಾರು ಗೆಲ್ಲಬಹುದು, ಎಂದು ಹೇಳುವುದೂ ಕಷ್ಟವಾಯಿತು. ಇವರಲ್ಲಿ ಯಾರ ಮತ ಸರಿ ಎಂದು

ನಿಶ್ಚಯಿಸುವುದು, ಆ ಸಾಕ್ಷಾತ್ ಸರಸ್ವತಿಯ ಅಂಶಸಂಭವಳಾದ ಉಭಯಭಾರತೀ ದೇವಿಗೇ ಸಾಧ್ಯವಾಗಲಿಲ್ಲ.

ಕೊನೆಗೆ ಮಂಡನನ ಹೆಂಡತಿಯಾದ ಉಭಯ ಭಾರತಿಯು ಎರಡು ಹೂಮಾಲೆಗಳನ್ನು ತಂದು ಇಬ್ಬರ ಕೊರಳಿಗೂ ಹಾಕಿದಳು. 'ಯಾರ ಕೊರಳಿನ ಹೂಮಾಲೆಯು ಮೊದಲು ಬಾಡಿ ಹೋಗುವುದೋ ಅವರು ಅಪಜಯ ಹೊಂದಿದ್ದಂತೆ' ತಿಳಿಯಬೇಕು ಎಂದು ನಿಶ್ಚಯಿಸಿ ಹೇಳಿದಳು. ಅನಂತರ ವಾಗ್ವಾದವು ಆರು ದಿನಗಳವರೆಗೆ ಮುಂದು ವರೆಯಿತು. ಯಾರ ಮಾಲೆಯೂ ಬಾಡಲಿಲ್ಲ. ಏಳನೆಯ ದಿವಸ ವಾಗ್ವಾದ ಪ್ರಾರಂಭವಾಯಿತು.

ಮಂಡನನು "ಪ್ರತಿಯೊಬ್ಬನೂ ತನಗೆ ವಿಧಿಸಲ್ಪಟ್ಟ ಕರ್ಮ ಗಳನ್ನು ಮಾಡಲೇಬೇಕು. ಕರ್ಮಭ್ರಷ್ಟನಿಗೆ ಅಧೋಗತಿಯೇ ಹೊರತು ಊರ್ಧ್ವಗತಿಯಿಲ್ಲವೆಂದು ಶ್ರುತಿಗಳೇ ಸಾರುತ್ತಿರುವುವು. 'ಕರ್ಮವೇ' ಮೋಕ್ಷ ಸಾಧನವು" ಎಂದು ಹೇಳಲು ಶಂಕರರು ಈ ರೀತಿ ಉತ್ತರಿಸಿದರು.

"ಕರ್ಮವು ನೇರವಾಗಿ ಮೋಕ್ಷ ಸಾಧನವಾಗಲಾರದು. ವಿಹಿತ ವಾದ ಕರ್ಮಗಳನ್ನು ಮಾಡುವುದರಿಂದ ಮನಸ್ಸು ಪರಿಪಕ್ವಗೊಂಡು ಜ್ಞಾನಾರ್ಜನೆಗೆ ಸಾಧನವಾಗುತ್ತದೆ. ಆ ಜ್ಞಾನದಿಂದ ಮುಕ್ತಿಯು ಸಿಗುತ್ತದೆ. ಕರ್ಮವು ಮೋಕ್ಷಕ್ಕೆ ಸಾಧನವಾದ ಜ್ಞಾನಕ್ಕೆ ಸಾಧನವೇ ಹೊರತು ಕರ್ಮವೇ ಮೋಕ್ಷವನ್ನು ಕೊಡಲಾರದು. ಅನ್ನ ಮಾಡ ಬೇಕಾದರೆ ಅಕ್ಕಿಯು ಸಾಧನ ಎನ್ನಿಸಿಕೊಳ್ಳುವುದು. ಆದರೆ ಅಕ್ಕಿಯನ್ನು ಬೆಳೆಯುವುದಕ್ಕೆ ಬೇಕಾದ ಬೀಜ, ಗೊಬ್ಬರ ಮುಂತಾದುವುಗಳನ್ನು ಅನ್ನಕ್ಕೆ ಸಾಧನವೆಂದು ಹೇಳಲಾಗುವುದಿಲ್ಲ. ಬೀಜ ಗೊಬ್ಬರಗಳಿಲ್ಲದೆ ಅಕ್ಕಿಯಾಗಿ ಅನ್ನವಾಗುವುದಿಲ್ಲ. ಅಕ್ಕಿ ಬರುವುದಕ್ಕೆ ಬೀಜ ಗೊಬ್ಬರ

ಗಳು ಅತ್ಯವಶ್ಯಕ. ಆದರೆ ಬೆಳೆ ಬಂದು ಅಕ್ಕಿಯು ದೊರೆತಮೇಲೆ ಅನ್ನವಾಗುವುದಕ್ಕೆ ಬೀಜ ಗೊಬ್ಬರಗಳ ಅವಶ್ಯಕತೆ ಏನು ? ಹಾಗೆಯೇ ಜ್ಞಾನವನ್ನು ಪಡೆಯುವುದಕ್ಕೆ ಕರ್ಮವು ಅವಶ್ಯಕವಾಗಿರಬಹುದು. ಆದರೆ 'ಏಕಮೇವಾ ದ್ವಿತೀಯಂ ಬ್ರಹ್ಮ' (ಬ್ರಹ್ಮ ಎಂಬುದು ಒಂದೇ, ಎರಡಲ್ಲ) "ಬ್ರಹ್ಮ ಸತ್ಯಂ ಜಗನ್ಮಿಥ್ಯಾ" (ಬ್ರಹ್ಮವೊಂದೇ ಸತ್ಯವು ; ಭೂತ, ವರ್ತಮಾನ, ಭವಿಷ್ಯತ್ ಎಂಬ ಮೂರು ಕಾಲಗಳಲ್ಲಿಯೂ ಶಾಶ್ವತವಾಗಿ, ಪೂರ್ಣವಾಗಿರುವುದು. ಜಗತ್ತು ಕೇವಲ ತೋರಿಕೆಯೇ ಹೊರತು ಮತ್ತೇನೂ ಅಲ್ಲ) ಎಂಬ ಜ್ಞಾನವುಂಟಾದ ಮೇಲೆ ಕರ್ಮದ ಪ್ರಯೋಜನವೇನು ? ಜ್ಞಾನವು ಕರ್ಮದ ಸಹಾಯವಿಲ್ಲದೆ ಮುಕ್ತಿಯನ್ನು ಕೊಡುತ್ತದೆ. ಜ್ಞಾನಿಗೆ, ಕರ್ಮ, ಅಕರ್ಮಗಳೆಂಬುವು ಇಲ್ಲವೇ ಇಲ್ಲ. ಜ್ಞಾನದಿಂದಲೇ ಮುಕ್ತಿ, ಮತ್ತಾವುದರಿಂದಲೂ ಸಾಧ್ಯವಿಲ್ಲ"

ಶಂಕರರ ಈ ವಾಕ್ಯಗಳನ್ನು ಕೇಳಿ ಮಂಡನನು ಮುಂದೆ ಪ್ರಶ್ನೆ ಹಾಕಲಾರದೆ ಸುಮ್ಮನಾದನು. ಜ್ಞಾನಕಾಂಡವು ಕರ್ಮಕಾಂಡಕ್ಕಿಂತ ಶ್ರೇಷ್ಠವಾದುದು ಎಂದು ಶಂಕರರು ಘೋಷಿಸಿದರು. ಮಂಡನಮಿಶ್ರನ ಕೊರಳಿನಲ್ಲಿ ಇದ್ದ ಹಾರವನ್ನು ನೋಡಲು, ಅದು ಬಾಡಿ ನೂಲಿನ್ಯತೆ ಹೊಂದಿತ್ತು. ಶಂಕರರ ಶಿಷ್ಯರು "ಶಂಕರರು ವಿಜಯಿಗಳಾದರು, ಶಂಕರರಿಗೆ ಜಯ ! ಶಂಕರರಿಗೆ ಜಯ ! !" ಎಂದು ಉದ್ಘೋಷಿಸಿದರು.

## ಪ್ರಕರಣ ೧೦

### ಪರಕಾಯ ಪ್ರವೇಶ

ಪತಿಯ ಪರಾಜಯವನ್ನು ಕಂಡು ಉಭಯ ಭಾರತೀದೇವಿಯು ಶಂಕರರನ್ನು ಕುರಿತು "ಯತೀಶ್ವರ ! ನನ್ನ ಪತಿಯ ಅರ್ಧಾಂಗಿಯೆಂದೆನಿಸಿಕೊಂಡಿರುವ ನನ್ನನ್ನು ಗೆಲ್ಲದೆಯೇ, ನೀವು ವಾದದಲ್ಲಿ ಪೂರ್ಣವಾಗಿ

ಗೆದ್ದಂತೆ ಆಗಲಿಲ್ಲ. ನನ್ನೊಡನೆ ವಾದಮಾಡಿ ಗೆದ್ದನಂತರವೇ ನಿಮಗೆ ಪೂರ್ಣವಾದ ಗೆಲುವು ದೊರೆಯುವುದು" ಎಂದು ಹೇಳಿದಳು. ಶಂಕರರು "ನೀವು ಹೇಳಿದುದು ಸರಿ" ಎಂದು ಒಪ್ಪಿ ಚರ್ಚೆಗೆ ಕುಳಿತರು.

ವಾಗ್ವಾದವು ಬಿರುಸಾಗಿಯೇ ನಡೆಯಿತು. ವಾದಿ ಪ್ರತಿವಾದಿಗಳಿಬ್ಬರೂ ಉದಾಹರಣೆಗಳಿಂದಲೂ ಉಕ್ತಿಗಳಿಂದಲೂ, ಯುಕ್ತಿವಾದಗಳಿಂದಲೂ ತಮ್ಮ ಮತವನ್ನು ಬಲಪಡಿಸಿ ಎದುರಾಳಿಯ ಮತವನ್ನು ಖಂಡಿಸಿದರು. ವಾದವು ಮುಂದುವರೆಯಲು, ಸರಸ್ವತಿಯ ಅಂಶಸಂಭವಳಾದ ಉಭಯ ಭಾರತಿಯೂ ಸೋಲುವ ಸಮಯ ಬಂತು. ಉಭಯ ಭಾರತಿಯ ನಿರರ್ಗಳವಾದ ವಾಗ್ಝರಿಯು ಶಂಕರರನ್ನು ಎದುರಿಸಲಾರದೆ ಹೋಯಿತು. ಉಭಯ ಭಾರತಿಯು ಸೋಲನ್ನು ಒಪ್ಪಿಕೊಳ್ಳುವುದಾಗಿ ಮನಸ್ಸು ಮಾಡಿ ಪತಿಯ ಕಡೆಗೆ ನೋಡಿದಳು. ಅದುವರೆಗೂ ನಗುಮುಖದಲ್ಲಿದ್ದ ಪತಿಯ ಮುಖವು ಕಾಂತಿಹೀನವಾಗುತ್ತಿರುವುದನ್ನು ಕಂಡು ಮನಸ್ಸಿನಲ್ಲಿಯೇ ಖೇದಗೊಂಡಳು. "ಪತಿಯ ಸಂತೋಷವೇ ನನ್ನ ಸಂತೋಷ, ಪತಿಯ ದುಃಖವೇ ನನ್ನ ದುಃಖ" ಎಂದು ಭಾವಿಸಿದ್ದ ಉಭಯ ಭಾರತಿಯು ಹೇಗಾದರೂ ಮಾಡಿ ಶಂಕರರನ್ನು ಸೋಲಿಸಿ ಪತಿಗೆ ಸಂತೋಷವನ್ನುಂಟುಮಾಡಬೇಕೆಂಬ ನಿರ್ಧಾರಕ್ಕೆ ಬಂದಳು.

ಶಂಕರರು ಯತಿಗಳು. ಬಾಲ್ಯದಲ್ಲಿಯೇ ಸಂನ್ಯಾಸವನ್ನು ಸ್ವೀಕರಿಸಿದವರು. ಗೃಹಸ್ಥಾಶ್ರಮದಲ್ಲಿದ್ದು ಸಂನ್ಯಾಸವನ್ನು ಸ್ವೀಕರಿಸಿದವರಲ್ಲ. ಇವರಿಗೆ ಕಾಮ-ಕಲೆಯ ವಿಷಯವೇನೂ ತಿಳಿದಿರಲಾರದು. ಆ ವಿಷಯವನ್ನು ಕುರಿತು ಪ್ರಶ್ನೆ ಮಾಡಿದರೆ ಉತ್ತರಿಸಲಾಗದೆ ಸುಮ್ಮನಾಗುವುದು ಖಂಡಿತ. ಕಾಮ ಶಾಸ್ತ್ರವನ್ನು ತಿಳಿಯದೇ ಇರುವುದರಿಂದ ಇವರ ಸರ್ವಜ್ಞತ್ವಕ್ಕೆ ಚ್ಯುತಿಯುಂಟಾಗುವುದು" ಎಂದು ಯೋಚಿಸಿ

ಉಭಯಭಾರತಿಯು ಕಾಮಶಾಸ್ತ್ರಕ್ಕೆ ಸಂಬಂಧಪಟ್ಟ ಕೆಲವು ಪ್ರಶ್ನೆಗಳನ್ನು ಕೇಳಿದಳು.

ಶಂಕರರು ಆ ವಿಷಯದಲ್ಲಿ ಚರ್ಚಿಸಲು ಒಂದು ತಿಂಗಳ ಅವಧಿಯನ್ನು ಕೇಳಿದರು. ಉಭಯ ಭಾರತಿಯು ಅದಕ್ಕೆ ಒಪ್ಪಿ ಅವದಿಯನ್ನು ಕೊಟ್ಟಳು. ಶಂಕರರು, ತಾವು ಯತಿಗಳಾದ್ದರಿಂದ ಒಬ್ಬ ಗೃಹಸ್ಥನ ದೇಹವನ್ನುಹೊಕ್ಕು, ಆ ದೇಹದಲ್ಲಿದ್ದುಕೊಂಡು ಕಾಮ ಕಲೆಯನ್ನು ಅಭ್ಯಸಿಸಬೇಕೆಂದು ನಿಶ್ಚಯಿಸಿಕೊಂಡರು.

ಸನಂದಾದಿ ಶಿಷ್ಯರನ್ನು ಕರೆದು "ಹೇ ಶಿಷ್ಯರಿರಾ! ನನ್ನ ಸರ್ವಜ್ಞತ್ವವನ್ನು ಸ್ಥಾಪಿಸಬೇಕಾದರೆ ಉಭಯ ಭಾರತೀ ದೇವಿಯ ಪ್ರಶ್ನೆಗಳಿಗೆ ಉತ್ತರವನ್ನು ಕೊಡಲೇಬೇಕು. ಆದುದರಿಂದ ನನ್ನ ದೇಹವನ್ನು ನಿಮ್ಮಲ್ಲಿ ಬಿಟ್ಟು ಪರಕಾಯ ಪ್ರವೇಶ (ಪರ-ಬೇರೆಯವರ ಕಾಯ-ದೇಹವನ್ನು ಸೇರುತ್ತೇನೆ) ಮಾಡುತ್ತೇನೆ. ನಾನು ಹಿಂತಿರುಗಿ ಬರುವವರೆಗೂ ನೀವು ನನ್ನ ದೇಹವನ್ನು ಬಹಳ ಜಾಗ್ರತೆಯಿಂದ ಕಾಪಾಡಬೇಕು. ಆ ದೇಹಕ್ಕೆ ಹಾನಿಯುಂಟಾದರೆ ನೀವು ನನ್ನನ್ನು ಪುನಃ ನೋಡಲಾರಿರಿ" ಎಂದು ತಿಳುಹಿ ತಮ್ಮ ಶರೀರವನ್ನು ಹಿಮವತ್ಪ್ರಾಂತ್ಯದ ಒಂದು ಗುಹೆಯಲ್ಲಿ ತ್ಯಾಗಮಾಡಿ, ಅದರ ಕಾವಲಿಗೆ ಶಿಷ್ಯರನ್ನು ನಿಯಮಿಸಿ ಬೇರೊಂದು ದೇಹವನ್ನು ಹುಡುಕುತ್ತಾ ಹೊರಟರು.

ಚೇತನ ರೂಪಿ ಶಂಕರರು ಹೀಗೆ ಹುಡುಕುತ್ತಾ ಬರುತ್ತಿರುವಾಗ, ಘೂರ್ಜರ ದೇಶವನ್ನು ಸೇರಿದರು. ಅಲ್ಲಿ ಆ ದೇಶದ ರಾಜನಾದ ಅಮರುಕನೆಂಬುವವನ ಶವವನ್ನು ಮುಂದಿಟ್ಟುಕೊಂಡು, ರಾಣಿಯರೂ, ಮಂತ್ರಿಗಳೂ, ಸೇವಕರೂ ರೋದಿಸುತ್ತಿದ್ದುದು ಕಂಡು ಬಂದಿತು. ಶಂಕರರು ಪರಕಾಯ ಪ್ರವೇಶಕ್ಕೆ ಈ ದೇಹವೇ ಅನುಕೂಲವಾದದ್ದು

ಎಂದು ಯೋಚಿಸಿ ಯೋಗಶಕ್ತಿಯಿಂದ ಆ ದೇಹವನ್ನು ಹೊಕ್ಕರು. ಅದುವರೆಗೆ ಚೇಷ್ಟಾರಹಿತವಾಗಿದ್ದ ಅಮರುಕ ರಾಜನ ಮೃತ ದೇಹವು ಉಸಿರಾಡತೊಡಗಿತು. ಕೆಲವು ನಿಮಿಷಗಳನಂತರ ಕೈಕಾಲುಗಳನ್ನೂ ಆಡಿಸತೊಡಗಿತು.

ಎಲ್ಲರಿಗೂ ಸಂತೋಷವೊಂದು ಕಡೆ. ಆಶ್ಚರ್ಯವೊಂದು ಕಡೆ. ಸತ್ತ ರಾಜನು ಬದುಕಿದನೆಂದರೆ ಯಾರಿಗೆ ಆಶ್ಚರ್ಯವಲ್ಲ! ಎಲ್ಲರೂ ಆಶ್ಚರ್ಯ ಮತ್ತು ಸಂತೋಷಗಳಿಂದ ಮಂಗಳ ವಾದ್ಯಗಳ ಜೊತೆಗೆ ರಾಜನ ಅರಮನೆಯನ್ನು ಸೇರಿದರು. ರಾಜನು ಸಿಂಹಾಸನದಲ್ಲಿ ಕುಳಿತನು.

ರಾಜನ ಮುಖದಲ್ಲಿ ಕಂಡುಬರುವ ವರ್ಚಸ್ಸನ್ನು ಕಂಡು ಎಲ್ಲರಿಗೂ ಆಶ್ಚರ್ಯ! ರಾಜನು ಮೊದಲಿನ ರಾಜನಂತಿರಲಿಲ್ಲ. ದೇಹವು ಮಾತ್ರ ಮೊದಲಿನ ರಾಜನದು, ಆದರೆ ನಡತೆ ವ್ಯವಹಾರಗಳಲ್ಲಿ ಅಜಗಜಾಂತರ. ಯಾವ ರಾಜ ಕಾರ್ಯದಲ್ಲಿ ತೊಡಗಬೇಕಾಗಿದ್ದರೂ ಮಂತ್ರಿಗಳ ಸಲಹೆಯನ್ನು ತಪ್ಪದೆ ತೆಗೆದುಕೊಳ್ಳುತ್ತಿದ್ದ ರಾಜನು ಈಗ ಎಲ್ಲವನ್ನೂ ಸ್ವಬುದ್ಧಿಯಿಂದಲೇ ಚರ್ಚಿಸುತ್ತಿದ್ದಾನೆ. ಪ್ರಜೆಗಳ ಸೌಖ್ಯ ಶಾಂತಿಗಳಿಗೆ ಬೇಕಾದ ಎಷ್ಟೆಷ್ಟೋ ಹೊಸಹೊಸ ಆಚರಣೆಗಳನ್ನು ತಂದಿದ್ದಾನೆ, ಎಂದರೆ ಯಾರಿಗೆ ತಾನೆ ಅನುಮಾನ ಬರದು?

ಸರಸ್ವತಿಯು ಶಂಕರರಿಗೆ ಕೊಟ್ಟಿದ್ದ ಅವಧಿಯ ಕಾಲವಾದ ಒಂದು ತಿಂಗಳು ಮುಗಿಯುವ ಕಾಲ ಸಮೀಪಿಸಿತು. ಶಂಕರರು ಹಿಂದಿರುಗಿ ಬರದಿದ್ದುದನ್ನು ಕಂಡು, ಪದ್ಮಪಾದರೇ ಮೊದಲಾದ ಶಿಷ್ಯರು ದೇಶಾಂತರದಿಂದ ರಾಜನ ಬಳಿಗೆ ಬಂದರು. ಅವರು "ಎಲೈ ದುಂಬಿಯೇ, ಹೂವಿನ ಮಕರಂದಕ್ಕಾಗಿ ಬಂದು ನಿನ್ನ ವಾಸಸ್ಥಾನವಾದ ಪರ್ವತವನ್ನೇ ಮರೆತುಬಿಟ್ಟೆಯಾ!" ಎಂದು ಹಾಡಿದ ಹಾಡನ್ನು ಕೇಳಿ

ಶಂಕರರಿಗೆ ಪೂರ್ವಸ್ಮೃತಿಯುಂಟಾಯಿತು. ಅವರು ದುಂಬಿಯನ್ನು ತಮಗೆ ಅನ್ವಯಿಸಿಕೊಂಡು ತಮ್ಮ ದೇಹವನ್ನು ಹಿಮವತ್ಪರ್ವತದ ಹತ್ತಿರ ಬಿಟ್ಟು ಬಂದಿರುವುದನ್ನು ಸ್ಮರಿಸಿಕೊಂಡರು. ಆ ಗಾಯಕರನ್ನು ಸನ್ಮಾನಿಸಿ ಕಳುಹಿಸಿಕೊಟ್ಟು, ಶಂಕರರು ರಾಜ ದೇಹವನ್ನು ತ್ಯಜಿಸುವುದಾಗಿ ನಿಶ್ಚಯಿಸಿಕೊಂಡರು.

ಅಷ್ಟರಲ್ಲಿ ಮುಖ್ಯ ಮಂತ್ರಿಯಾದವನು "ಇದು ನಮ್ಮ ಅಮರುಕ ರಾಜನ ದೇಹ ಮಾತ್ರವಲ್ಲದೆ, ನಮ್ಮ ರಾಜನ ಮೇಧಾ ಶಕ್ತಿಯಲ್ಲ. ಆ ಮೃತ ದೇಹದಲ್ಲಿ ಯಾವನೋ ಒಬ್ಬ ಅಪ್ರತಿಮ ಮೇಧಾವಂತನಾದ ಯೋಗಿಯು ಬಂದು ಸೇರಿರಬೇಕು. ಈ ಯೋಗಿಯು ಇದೇ ದೇಹದಲ್ಲಿ ಉಳಿದುಕೊಂಡಿರುವಂತೆ ಮಾಡಿದರೆ ನಮ್ಮ ರಾಜ್ಯದಲ್ಲಿ ಶಾಂತಿ-ಸುಭಿಕ್ಷಗಳು ಶಾಶ್ವತವಾಗಿ ನೆಲೆಗೊಳ್ಳುತ್ತವೆ." ಎಂದು ಯೋಚಿಸಿ ತನ್ನ ಮನಸ್ಸಿನ ಕೋರಿಕೆಯನ್ನು ರಾಣಿಯಲ್ಲಿ ನಿವೇದಿಸಿಕೊಂಡನು.

ರಾಣಿಯು ಹಾಗೆಯೇ ಮಾಡುವುದಾಗಿ ಅನುಮತಿಯಿತ್ತಳು. "ಪ್ರಾಣವಿಲ್ಲದ ಮನುಷ್ಯ ಶರೀರಗಳು ಎಲ್ಲಿದ್ದರೂ ಸರಿಯೇ, ಅವುಗಳನ್ನು ಹುಡುಕಿ ಸುಟ್ಟುಬಿಡಿ" ಎಂದು ಮಂತ್ರಿಯು ರಾಜಭಟರಿಗೆ ಆಜ್ಞೆಯನ್ನು ಕೊಟ್ಟನು. ಅವರು ಬಹುಮಾನದ ಆಸೆಗಾಗಿ ದೊರೆತ ಶವಗಳಲ್ಲಿ ಒಂದನ್ನೂ ಬಿಡದೆ, ಬೆಂಕಿಗೆ ಆಹುತಿಕೊಡುತ್ತಾ ಬಂದರು.

ಆ ವೇಳೆಗೆ ಶಂಕರರು ದೇಹಾಂತರದಿಂದ ಉಭಯ ಭಾರತಿ ದೇವಿಯ ಪ್ರಶ್ನೆಗಳಿಗೆ ಉತ್ತರವನ್ನು ಸಿದ್ಧಪಡಿಸಿಕೊಂಡಿದ್ದರು. 'ಇನ್ನು ಈ ದೇಹವನ್ನು ತ್ಯಜಿಸುವುದೇ ಸರಿ' ಯೆಂದು ತೀರ್ಮಾನಿಸಿದ ಶಂಕರರು ಕೂಡಲೇ ಅಮರುಕ ರಾಜನ ದೇಹವನ್ನು ಬಿಟ್ಟುಬಿಟ್ಟರು. ಚೈತನ್ಯ

ರೂಪಿಯಾಗಿ ಶಂಕರರು ತಮ್ಮ ಮೊದಲಿನ ದೇಹವನ್ನು ಅರಸುತ್ತಾ ಸನಂದಾಧಿಗಳಿದ್ದ ಹಿಮುವತ್ಪ್ರದೇಶಕ್ಕೆ ಬಂದರು.

ಇತ್ತಲಾಗಿ ಮಂತ್ರಿಯಿಂದ ಆಜ್ಞಪ್ತರಾದ ಭಟರು ಶಂಕರರ ದೇಹವನ್ನು ಕಂಡು ಸುಡುವುದಕ್ಕಾಗಿ ಪ್ರಯತ್ನಪಡುತ್ತಿದ್ದರು. ಪದ್ಮ ಪಾದಾದಿಗಳಿಂದ ಬಗೆಬಗೆಯಾಗಿ ನಿವಾರಿಸಲ್ಪಟ್ಟಾಗ್ಯೂ ಅವರು ಬಹು ಮಾನದ ಆಸೆಯಿಂದ ಚಿತೆಯನ್ನು ಸಿದ್ಧಪಡಿಸಿ ಅದರ ಮೇಲೆ ಶಂಕರರ ದೇಹವನ್ನು ಇಟ್ಟಿದ್ದರು. ಶಂಕರರು ತಮ್ಮ ಪೂರ್ವ ದೇಹವನ್ನು ಹೊಕ್ಕರು. ಶವವು ಎದ್ದು ಕುಳಿತುದನ್ನು ಕಂಡು ರಾಜ ದೂತರಿಗೆ, ಆಶ್ಚರ್ಯವೂ ಹೆದರಿಕೆಯೂ ಉಂಟಾದುವು.

ಆಗ ಚಿತೆಯ ಮಧ್ಯದಲ್ಲಿ ಶಂಕರರು ನೃಸಿಂಹಮೂರ್ತಿಯನ್ನು "ಶ್ರೀಮತ್ಪಯೋನಿಧಿ ನಿಕೇತನ ಚಕ್ರಪಾಣೇ, ಭೋಗೀಂದ್ರ ಭೋಗಿ ಮಣಿರಂಜಿತ ಪುಣ್ಯ ಮೂರ್ತೇ! ಯೋಗೀಶ! ಶಾಶ್ವತ! ಶರಣ್ಯ! ಭವಾಬ್ಧಿಪೋತ, ಲಕ್ಷ್ಮೀನೃಸಿಂಹ ಮಮದೇಹಿ ಕರಾವಲಂಬಂ ॥" ಎಂಬುದಾಗಿ ಪ್ರಾರ್ಥಿಸಿದರು. ಪ್ರಸನ್ನನಾದ ನರಸಿಂಹಸ್ವಾಮಿಯು ಪ್ರತ್ಯಕ್ಷನಾಗಿ ಧಗಧಗ ಉರಿಯುತ್ತಿದ್ದ ಅಗ್ನಿಯನ್ನು ಶಾಂತಗೊಳಿಸಿ ಆಶೀರ್ವಾದ ಮಾಡಿದನು.

## ಪ್ರಕರಣ ೧೧

## ಕಾಪಾಲಿಕನ ಬಲಿ

ನರಸಿಂಹ ಸ್ವಾಮಿಯ ದರ್ಶನದಿಂದ ಸಂತುಷ್ಟರಾದ ಶಂಕರರು ತಮ್ಮ ಶಿಷ್ಯರೊಡನೆ ಮಾಹಿಷ್ಮತೀ ನಗರವನ್ನು ಸೇರಿದರು. ಮತ್ತು ಉಭಯ ಭಾರತೀ ದೇವಿಯೊಡನೆ ವಾದ ಮಾಡುವುದಕ್ಕೆ ತಾವು ಸಿದ್ಧ ವಾಗಿರುವುದಾಗಿ ತಿಳಿಸಿದರು.

ಕೊಟ್ಟ ಅವಧಿಯೊಳಗಾಗಿ ಬಂದ ಶಂಕರರನ್ನು ಕಂಡು ಉಭಯ ಭಾರತಿಯು, "ಆಚಾರ್ಯ! ಈಗ ನೀವು ನನ್ನೊಡನೆ ವಾದ ಮಾಡ ಬೇಕಾದ ಅಗತ್ಯವಿಲ್ಲ. ನೀವು ಸಾಕ್ಷಾತ್ ಶಂಕರರೇ ಎಂಬುವುದರಲ್ಲಿ ಯಾವ ಅನುಮಾನವೂ ಇಲ್ಲ. ಹಾಗಿಲ್ಲದಿದ್ದರೆ ಸಾಧಾರಣ ಮನುಷ್ಯ ರಿಗೆ ಈ ಅದ್ಭುತ ಕಾರ್ಯಗಳು ಸಾಧ್ಯವೇ? ಸೋತೆನೆಂದು ನಾನೇ ಒಪ್ಪಿ ಕೊಳ್ಳುತ್ತೇನೆ. ನಾವು ನಿಮ್ಮಿಂದ ಸೋತರೂ ಅದು ನಮಗೆ ಒಂದು ಹೆಮ್ಮೆಯನ್ನು ತರುವ ವಿಷಯವೇ ಆಗಿದೆ. ನನ್ನ ಪತಿಯು ಸಂನ್ಯಾಸ ವನ್ನು ತೆಗೆದುಕೊಳ್ಳುವುದಕ್ಕೆ ಮುನ್ನವೇ ನಾನು ಸ್ವಸ್ಥಾನವನ್ನು ಸೇರ ಬೇಕೆಂದಿದ್ದೇನೆ. ನೀವು ಅಪ್ಪಣೆಯನ್ನು ಕೊಡಬೇಕಾಗಿ ಪ್ರಾರ್ಥಿಸು ತ್ತೇನೆ" ಎಂದು ಕೇಳಿಕೊಂಡಳು.

ಶಂಕರರು, "ಅಮ್ಮಾ ಸರಸ್ವತಿ! ನಾನು ಕೇಳುವ ವರವನ್ನು ಕೃಪೆಮಾಡಿ ನೀಡಿ, ನೀನು ಸ್ವಸ್ಥಾನವನ್ನು ಸೇರಬಹುದು. ನನಗೆ ಧರ್ಮ ರಕ್ಷಣೆ ಮತ್ತು ಧರ್ಮ ಪ್ರಚಾರಗಳಿಗೋಸ್ಕರ ಭೂಲೋಕದಲ್ಲಿ ಮಠ ಗಳನ್ನು ಸ್ಥಾಪಿಸಬೇಕೆಂಬ ಹಂಬಲು ಇದೆ. ಅಂತಹ ಮಠವೊಂದನ್ನು ಶೃಂಗಗಿರಿಯಲ್ಲಿ (ಈಗಿನ ಶೃಂಗೇರಿಯಲ್ಲಿ) ಸ್ಥಾಪಿಸುವವನಿದ್ದೇನೆ. ನೀನು ಅಲ್ಲಿ ಸದಾಕಾಲದಲ್ಲಿಯೂ ಸನ್ನಿಹಿತಳಾಗಿದ್ದು ಶಾರದಾ ಎಂಬ ಹೆಸರಿ ನಿಂದ ಪ್ರಖ್ಯಾತಳಾಗಬೇಕು" ಎನ್ನಲು ಉಭಯ ಭಾರತಿಯು ಹಾಗೆಯೇ ಆಗಲೆಂದು ಒಪ್ಪಿ ಸತ್ಯಲೋಕವನ್ನು ಕುರಿತು ಪ್ರಯಾಣ ಮಾಡಿದಳು.

ಪತ್ನಿಯು ಸ್ವಧಾಮವನ್ನು ಸೇರಲು ಇತ್ತ ಮಂಡನಮಿಶ್ರನು ಆಚಾರ್ಯರನ್ನು ಕುರಿತು, "ಆಚಾರ್ಯವರ್ಯ, ನಾನು ನಿಮ್ಮ ಶಿಷ್ಯ ನಾಗ ಬಯಸುತ್ತೇನೆ. ನನ್ನ ಪ್ರತಿಜ್ಞೆಯಂತೆ ನಾನು ಸಂನ್ಯಾಸವನ್ನು ಸ್ವೀಕರಿಸಲೇಬೇಕು. ನೀವೇ ನನಗೆ ಕೃಪೆ ಮಾಡಿ ಸಂನ್ಯಾಸವನ್ನು

ಕೊಟ್ಟು ನನ್ನನ್ನು ಪಾದಸೇವಕನನ್ನಾಗಿ ಪರಿಗಣಿಸಬೇಕು" ಎಂದು ಬೇಡಿಕೊಂಡನು.

ಶಂಕರರು ಆತನಿಗೆ ಕ್ರಮವಾಗಿ ಸಂನ್ಯಾಸವನ್ನು ಕೊಟ್ಟು 'ಸುರೇಶ್ವರಾಚಾರ್ಯ' ಎಂದು ನಾಮಕರಣ ಮಾಡಿದರು. ಅಂದಿನಿಂದ ಸುರೇಶ್ವರಾಚಾರ್ಯರು ಶಂಕರರ ಮುಖ್ಯ ಶಿಷ್ಯರಲ್ಲಿ ಎರಡನೆಯವರಾಗಿ ಶಂಕರರ ಪರಮಕೃಪೆಗೆ ಪಾತ್ರರಾದರು.

ಶಂಕರರು ಪ್ರಥಮ ಶಿಷ್ಯರಾದ ಪದ್ಮಪಾದರೊಡನೆಯೂ ದ್ವಿತೀಯಶಿಷ್ಯರಾದ ಸುರೇಶ್ವರಾಚಾರ್ಯರೊಡನೆಯೂ, ಉಳಿದ ಇತರ ಶಿಷ್ಯವರ್ಗದೊಡನೆಯೂ ಕೂಡಿದವರಾಗಿ ಮಾಹಿಷ್ಮತೀ ನಗರವನ್ನು ಬಿಟ್ಟು ಶ್ರೀಶೈಲ ಕ್ಷೇತ್ರವನ್ನು ಸೇರಿದರು. ಶ್ರೀಶೈಲ ಕ್ಷೇತ್ರವು ಪುಣ್ಯದಾಯಕವಾದ ಪವಿತ್ರ ಕ್ಷೇತ್ರ. ಅಲ್ಲಿ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ "ಮಲ್ಲಿಕಾರ್ಜುನ" ಎಂಬ ಹೆಸರಿನ ಲಿಂಗವಿದೆ. ಆಚಾರ್ಯರು ಆ ಮಲ್ಲಿಕಾರ್ಜುನ ಲಿಂಗವನ್ನು ಸ್ವಹಸ್ತದಿಂದ ಅರ್ಚಿಸಿ ಅನೇಕ ಪ್ರಕಾರವಾಗಿ ಸ್ತೋತ್ರ ಮಾಡಿದರು.

ಆ ಪ್ರಾಂತ್ಯದಲ್ಲಿ ಹೆಂಡವನ್ನು ಕುಡಿಯುವ ಅಭ್ಯಾಸವುಳ್ಳ ಕಾಪಾಲಿಕರೆಂಬುವರು ವಾಸಿಸುತ್ತಿದ್ದರು. ಆ ಕೆಟ್ಟ ಪದ್ಧತಿಯನ್ನು ಬಿಡಿಸುವುದಕ್ಕಾಗಿ ಬಹಳ ಪ್ರಯತ್ನಪಟ್ಟರು. "ಸುರಾಪಾನವು ಬುದ್ಧಿಯನ್ನು ಕೆಡಿಸಿಬಿಡುವುದು. ಬುದ್ಧಿಯು ಕೆಟ್ಟುಹೋದರೆ ಉಚಿತ, ಅನುಚಿತಗಳ ತಾರತಮ್ಯ ಜ್ಞಾನವಿಲ್ಲದೆ ಪಾಪಗಳನ್ನು ಮಾಡಬೇಕಾಗಿ ಬರುವುದು. ಪಾಪವು ಮನುಷ್ಯನನ್ನು ನರಕಕ್ಕೆ ಕರೆದೊಯ್ಯುತ್ತವೆ. ಆದ್ದರಿಂದ ಹೆಂಡವನ್ನು ಕುಡಿಯಬೇಡಿ. ಸುರಾಪಾನವು ಶಾಸ್ತ್ರ ನಿಷಿದ್ಧವಾದದ್ದು" ಎಂದು ಬೋಧಿಸಿದರು. ಈ ಸಂದರ್ಭದಲ್ಲಿ ಶಂಕರರು ಅವರಿಗೆ ಈ ಕಥೆಯನ್ನು ತಿಳಿಸಿದರು.

“ ಹಿಂದೆ ಒಬ್ಬಾನೊಬ್ಬ ಬ್ರಾಹ್ಮಣನು ಒಂದಾನೊಂದು ಊರಿಗೆ ಹೋಗುತ್ತಿದ್ದನು. ಮಧ್ಯ ದಾರಿಯಲ್ಲಿ ಚಂಡಾಲನೊಬ್ಬನು ತಲೆಯ ಮೇಲೆ ಹೆಂಡದ ಕುಡಿಕೆಯನ್ನು ಹೊತ್ತುಕೊಂಡು ಎದುರಿಗೆ ಬಂದನು. ಅವನ ಕೊಂಕಳಲ್ಲಿ ಒಂದು ವರ್ಷದ ಒಂದು ಎಳೆಗೂಸು ಇತ್ತು. ಅವನ ಜೊತೆಯಲ್ಲಿ ಒಬ್ಬ ಚಂಡಾಲ ಸ್ತ್ರೀಯೂ ಇದ್ದಳು. ಆ ಚಂಡಾಲನ ಭೀಕರ ರೂಪವನ್ನು ಕಂಡು ಬ್ರಾಹ್ಮಣನಿಗೆ ಹೆದರಿಕೆಯಾಯಿತು.

“ ಆ ದುಷ್ಟಸ್ವಭಾವದ ಚಂಡಾಲನು ಬ್ರಾಹ್ಮಣನನ್ನು ಕಂಡು ಹೇಗಾದರೂ ಮಾಡಿ ಇವನನ್ನು ಜಾತಿಭ್ರಷ್ಟನಾಗಿ ಮಾಡಬೇಕೆಂದು ಯೋಚಿಸಿದನು ಮತ್ತು ಬ್ರಾಹ್ಮಣನನ್ನು ಕುರಿತು “ ಇವಳು ನನ್ನ ಮಗಳು. ಇವಳಿಗೆ ಮದುವೆಮಾಡಬೇಕೆಂದು ಅನೇಕ ಕಡೆಗಳಲ್ಲಿ ವರನನ್ನು ಹುಡುಕಿದೆ. ನನ್ನ ಮಗಳಿಗೆ ಸರಿಯಾದ ವರನೆಲ್ಲೂ ಸಿಗಲಿಲ್ಲ. ಆದುದರಿಂದ ಇವಳಿಗೆ ಇನ್ನು ಮದುವೆಯಾಗಿಲ್ಲ. ನೀನು ಇವಳನ್ನು ಮದುವೆಯಾಗು ” ಎಂದನು. ಬ್ರಾಹ್ಮಣನು ಬೇರೆ ಜಾತಿಯ ಹೆಣ್ಣನ್ನು ಮದುವೆಯಾಗುವುದು ಶಾಸ್ತ್ರವಿರುದ್ಧವೆಂದು ಅದಕ್ಕೆ ಒಪ್ಪಲಿಲ್ಲ. ಚಂಡಾಲನು “ ಹೋಗಲಿ ಬಿಡು ಈಗ ನಮಗೆ ಹಸಿವಾಗಿ ಪ್ರಾಣ ಹೋಗುತ್ತಿದೆ. ಈ ಮಗುವನ್ನು ಕೊಂದು ಅಡುಗೆ ಮಾಡಿ ಬಡಿಸು. ಇಲ್ಲದಿದ್ದರೆ ನಿನ್ನನ್ನು ಕೊಂದು ಬಿಡುತ್ತೇನೆ ” ಎಂದು ಬೆದರಿಸಿದನು. ಬ್ರಾಹ್ಮಣನು “ ಶಿಶು ಹತ್ಯೆಯನ್ನು ನಾನು ಮಾಡುವುದಿಲ್ಲ. ಶಿಶು ಹತ್ಯೆಯಂತಹ ಪಾಪ ಕೆಲಸ ಇನ್ನು ಯಾವುದೂ ಇಲ್ಲ. ಬೇಕಾದರೆ ನನ್ನನ್ನೇ ಕೊಲ್ಲು.” ಎಂದು ಧೈರ್ಯವಾಗಿ ನಿಂತುಕೊಂಡನು. ಬ್ರಾಹ್ಮಣನನ್ನು ಜಾತಿಭ್ರಷ್ಟನನ್ನಾಗಿ ಮಾಡಬೇಕೆಂದಿದ್ದ ಆ ಚಂಡಾಲನು ಕೊನೆಗೆ ಮದ್ಯವನ್ನಾದರೂ ಕುಡಿಯಲೇಬೇಕೆಂದು ಅವನನ್ನು ಒತ್ತಾಯ ಪಡಿಸಿದನು.

"ಬ್ರಾಹ್ಮಣನಾದರೋ ಪ್ರಾಣಾಪಾಯದ ಸಮಯದಲ್ಲಿ, ಪ್ರಾಣವನ್ನು ಉಳಿಸಿಕೊಳ್ಳಲು ಮಧ್ಯವನ್ನು ಕುಡಿದರೆ ತಪ್ಪೇನು ? ಅನಂತರ ಪ್ರಾಯಶ್ಚಿತ್ತಮಾಡಿಕೊಂಡರಾಯಿತು. ಪ್ರಾಣಗಳು ಹೋದರೆ ಯಾವ ವಿಧದಲ್ಲಿಯೂ ಪುಣ್ಯವನ್ನು ಸಂಪಾದಿಸಲಾಗುವುದಿಲ್ಲ. ಪ್ರಾಣಗಳಿದ್ದರೆ ಮೋಕ್ಷ ಸಂಪಾದನೆಗೆ ದಾರಿ ಮಾಡಿಕೊಳ್ಳಬಹುದು. ಆದುದರಿಂದ ಸರ್ವ ವಿಧದಿಂದಲೂ ದೇಹವನ್ನು ಕಾಪಾಡಿಕೊಳ್ಳಬೇಕೆಂದು ಹಿರಿಯರು ಹೇಳಿದ್ದಾರೆ. ಈಗ ಮಧ್ಯವನ್ನು ಕುಡಿದು ನನ್ನ ಪ್ರಾಣಗಳನ್ನು ಉಳಿಸಿಕೊಳ್ಳುತ್ತೇನೆ" ಎಂದು ಯೋಚಿಸಿ ಆ ಬ್ರಾಹ್ಮಣನು ಹೆಂಡವನ್ನು ಕುಡಿದನು. ಹೆಂಡವನ್ನು ಕುಡಿದುದರಿಂದ ಆ ಬ್ರಾಹ್ಮಣನಿಗೆ ಬುದ್ಧಿ ಕೆಟ್ಟಿತು. ಸ್ಮೃತಿಯಿಲ್ಲದ ಆ ಸಮಯದಲ್ಲಿ ಚಂಡಾಲನು ಆತನಿಗೆ ತನ್ನ ಮಗಳ ಸಂಬಂಧವನ್ನು ಮಾಡಿಸಿದನು ; ಮಗುವನ್ನು ಕೊಲ್ಲಿಸಿ ಅಡುಗೆಯನ್ನು ಮಾಡಿಸಿದನು. ಹೀಗೆ ಹೆಂಡದ ಪ್ರಭಾವದಿಂದ ಆ ಬ್ರಾಹ್ಮಣನು ಎಲ್ಲ ಪಾಪಗಳನ್ನೂ ಮಾಡಬೇಕಾಯಿತು.

"ಎಲೈ ಕಾಪಾಲಿಕರಿರಾ, ಸುರಾಪಾನವು ಬಹಳ ಅನರ್ಥಕಾರಿಯಾದುದರಿಂದ ಸುರಾಸೇವೆಯನ್ನು ಬಿಟ್ಟುಬಿಡಿ" ಎಂದು ಶಂಕರರು ಬೋಧಿಸಿ ಅವರ ಮನಸ್ಸನ್ನು ತಿದ್ದಿದರು.

ಆ ಕಾಪಾಲಿಕರ ಮುಖಂಡನಾದ ಉಗ್ರಭೈರವ ಎಂಬುವನು ತಮ್ಮ ಜನಗಳು ಶಂಕರರ–ಬೋಧನೆಗೆ ಒಳಗಾದುದನ್ನು ಕಂಡು ಕೋಪಗೊಂಡನು. ಹೇಗಾದರೂ ಮಾಡಿ ಶಂಕರರನ್ನು ಕೊಲ್ಲಬೇಕೆಂದು ಯೋಚಿಷಿ ಶಂಕರರ ಬಳಿಗೆ ಬಂದನು. ಮತ್ತು ಅವರಲ್ಲಿ ಪರಮ ಭಕ್ತನಂತೆ ನಟಿಸುತ್ತಾ ಹೀಗೆ ಹೇಳಿದನು. "ನಾನು ಭೈರವನನ್ನು ಕುರಿತು ಬಹಳವಾಗಿ ಪೂಜಿಸಿದೆ. ಭೈರವನು 'ಚಕ್ರವರ್ತಿಯ ಅಥವಾ ಸಂನ್ಯಾಸಿಯ ತಲೆಯನ್ನು ನನಗೆ ಬಲಿಕೊಟ್ಟರೆ ನಿನಗೆ ಒಲಿದು ನಿನ್ನ

ಇಷ್ಟಾರ್ಥವನ್ನು ಪೂರೈಸುತ್ತೇನೆ.' ಎಂದು ನುಡಿದನು. ಚಕ್ರವರ್ತಿಯೆಲ್ಲಿ? ನಾನೆಲ್ಲಿ? ಚಕ್ರವರ್ತಿಯ ತಲೆಯನ್ನು ಬಲಿಕೊಡುವುದು ಕನಸಿನಲ್ಲಿಯೂ ಅಸಾಧ್ಯವಾದ ಮಾತು. ನಿಮಗೆ ದೇಹದ ಮೇಲೆ ಸ್ವಲ್ಪವೂ ಅಭಿಮಾನ, ಮತ್ತು ಮಮತೆಗಳಿಲ್ಲ. ಅದೂ ಅಲ್ಲದೆ ನೀವು ಜೀವನವನ್ನು ಪರೋಪಕಾರಕ್ಕಾಗಿಯೇ ಮೀಸಲಾಗಿಟ್ಟವರು. ನೀವು ದಯೆಮಾಡಿ ಒಪ್ಪುವುದಾದರೆ ನಿಮ್ಮ ತಲೆಯನ್ನು ಬಲಿಕೊಟ್ಟು ನನ್ನ ಇಚ್ಛೆಯನ್ನು ಪೂರೈಸಿಕೊಳ್ಳುತ್ತೇನೆ."

ಶಂಕರರು ಸ್ವಲ್ಪವೂ ಅಂಜದೆ, ಹಿಂಜರಿಯದೆ "ಹಾಗೆಯೇ ಆಗಲಿ. ಈ ದೇಹದಿಂದ ನಿನಗೆ ಉಪಕಾರವಾಗುವುದಾದರೆ ನಾನೇಕೆ ಬೇಡವೆನ್ನಲಿ? ನಾಳೆಯ ದಿನ, ಪ್ರಾತಃಕಾಲದಲ್ಲಿ, ನನ್ನ ಶಿಷ್ಯರು ನದಿಗೆ ಹೋಗಿರುವ ಸಮಯದಲ್ಲಿ ಬಾ. ಆಗ ನಾನು ಸಮಾಧಿ ಸ್ಥಿತಿಯಲ್ಲಿರುತ್ತೇನೆ. ನೀನು ನಿನ್ನ ಕೆಲಸವನ್ನು ನಡೆಸಿಕೊಳ್ಳಬಹುದು" ಎಂದರು. ಕಾಪಾಲಿಕನಾದ ಉಗ್ರಭೈರವನು ಸಂತೋಷಿಸುತ್ತಾ ಹೊರಟು ಹೋದನು.

ಮಾರನೆಯ ದಿನ, ಸ್ನಾನಮಾಡಿ ಹೂಗಳನ್ನು ಕಿತ್ತುತರುವುದಕ್ಕಾಗಿ ಶಿಷ್ಯರುಗಳು ಪಕ್ಕದಲ್ಲಿಯೇ ಹರಿಯುತ್ತಿದ್ದ ನದಿಗೆ ಹೋಗಿದ್ದರು. ಶಂಕರರು ಸಮಾಧಿಸ್ಥರಾಗಿದ್ದರು, ಅಂದರೆ ಹೊರಗಿನ ಜ್ಞಾನವೇ ಇಲ್ಲದೆ ಆತ್ಮ ಚಿಂತೆಯನ್ನು ಮಾಡುತ್ತಾ ತದೇಕ ಧ್ಯಾನದಲ್ಲಿ ಮಗ್ನರಾಗಿದ್ದರು. ಅವರ ಮುಖದಲ್ಲಿ ಶಾಂತತೆ ತುಂಬಿತುಳುಕಾಡುತ್ತಿತ್ತು. ಅದೇ ಸಮಯದಲ್ಲಿ ಉಗ್ರಭೈರವನು ತನ್ನ ಕೈಯಲ್ಲಿ ಕತ್ತಿಯನ್ನು ಹಿಡಿದು ಬಂದನು.

ಉಗ್ರಭೈರವನು ಶಂಕರರ ಬಳಿಗೆ ಬಂದಾಗ ನದಿಯ ದಡದಲ್ಲಿದ್ದ ಸನಂದನರಿಗೆ (ಪದ್ಮಪಾದರಿಗೆ) ಏನೋ ಒಂದು ವಿಧವಾದ ಹೆದರಿಕೆಯುಂಟಾಯಿತು. ತಮ್ಮ ಉಪಾಸ್ಯದೇವನಾದ ನರಸಿಂಹಮೂರ್ತಿ




ಶಂಕರರನ್ನು ಕೊಲ್ಲಲು ಸಿದ್ಧನಾದ ಉಗ್ರಭೈರವನ ಕೈಯನ್ನು
ಪದ್ಮಪಾದರು ಹಿಡಿದು ನಿಲ್ಲಿಸಿದುದು

ಯನ್ನು ಸ್ಮರಿಸಿದರು. ನರಸಿಂಹಸ್ವಾಮಿಯು ಆವಿಷ್ಟನಾಗಲು ಪದ್ಮ ಪಾದರು ಆವೇಶವನ್ನು ಹೊಂದಿದರು. ಆವೇಶ ಪೂರಿತವಾದ ಆ ವೇಷದಲ್ಲಿ ಅವರು ಭಯಂಕರವಾಗಿ ಕಾಣುತ್ತಿದ್ದರು. ಆಗ ಅವರು ಒಂದೇ ನಿಮಿಷದಲ್ಲಿ ಆಶ್ರಮಕ್ಕೆ ಬಂದೇ ಬಿಟ್ಟರು. ಕೈಯಲ್ಲಿ ಕತ್ತಿಯನ್ನು ಹಿಡಿದು ನಿಂತಿರುವ ಭೈರವನನ್ನು ಅಲ್ಲಿ ಕಂಡರು.

ಇನ್ನೇನು ಆ ದುರಾತ್ಮನು ಶಂಕರರ ಕುತ್ತಿಗೆಯ ಮೇಲೆ ಕತ್ತಿಯನ್ನು ಇಳಿಸಬೇಕು. ಅಷ್ಟರಲ್ಲಿ ಉಗ್ರರೂಪದ ಪದ್ಮಪಾದರು ಅವನ ಕೈಯನ್ನು ಹಿಡಿದು ನಿಲ್ಲಿಸಿದರು. ಅದೇ ಕತ್ತಿಯನ್ನು ಕಿತ್ತುಕೊಂಡು ಘರ್ಜನೆ ಮಾಡುತ್ತಾ ಭೈರವನ ತಲೆಯನ್ನು ಕತ್ತರಿಸಿ ಚೆಂಡಾಡಿದರು. ಆ ಗದ್ದಲವನ್ನು ಕೇಳಿ, ಸಮಾಧಿಯಿಂದ ಎಚ್ಚೆತ್ತ ಶಂಕರರು ಭಯಂಕರವಾಗಿ ಕುಣಿದಾಡುತ್ತಿರುವ ಪದ್ಮಪಾದರನ್ನು ಕಂಡರು. ಮತ್ತು ಪ್ರಸನ್ನತೆಗಾಗಿ ನೃಸಿಂಹ ಸ್ತೋತ್ರವನ್ನು ಮಾಡಿದರು. ಕೂಡಲೇ ಪದ್ಮಪಾದರು ಶಾಂತ ರೂಪವನ್ನು ಹೊಂದಿದರು.

## ಪ್ರಕರಣ ೧೨

## ದೃಢಭಕ್ತಿಯ ಶ್ರೇಷ್ಠತೆ

ಶಂಕರರು ಪದ್ಮಪಾದರನ್ನು ಕುರಿತು "ಪದ್ಮಪಾದ! ನೀನು ನರಸಿಂಹನನ್ನು ಇಷ್ಟು ಸುಲಭವಾಗಿ ಹೇಗೆ ಒಲಿಸಿಕೊಂಡೆ?" ಎಂದು ಪ್ರಶ್ನಿಸಲು ಅವರು ಈ ರೀತಿ ಹೇಳಲುಪಕ್ರಮಿಸಿದರು.

"ಹಿಂದೆ ನಾನು ಅಹೋಬಲ ಕ್ಷೇತ್ರದಲ್ಲಿದ್ದೆ. ಆಗ ಒಬ್ಬ ಮಹನೀಯರು ನನಗೆ ನಾರಸಿಂಹ ಮಂತ್ರವನ್ನು ಉಪದೇಶಿಸಿದರು. ಅದರಲ್ಲಿ ಸಿದ್ಧಿಪಡೆದು ನರಸಿಂಹಸ್ವಾಮಿಯನ್ನು ಪ್ರತ್ಯಕ್ಷಗೊಳಿಸಿಕೊಳ್ಳು ವುದಕ್ಕೋಸ್ಕರ ಕಾಡಿಗೆ ಹೋದೆ. ಅಲ್ಲಿ ಬಹಳ ಕಾಲದವರೆಗೆ

ಘೋರವಾದ ತಪಸ್ಸನ್ನು ಮಾಡಿದಾಗ್ಯೂ ನೃಸಿಂಹನು ಪ್ರತ್ಯಕ್ಷ ನಾಗಲಿಲ್ಲ.

"ಹೀಗಿರುವಾಗ ಒಂದು ದಿವಸ ಒಬ್ಬ ಬೇಡನು ಬಂದು 'ಸ್ವಾಮಿ, ನೀವು ಇಲ್ಲಿ ಬಹಳ ದಿವಸಗಳಿಂದ ಯಾರಿಗಾಗಿಯೋ ಕಾದು ಕುಳಿತಿರುವಂತೆ ತೋರುತ್ತೆ. ಯಾರಿಗಾಗಿ ಕಾದಿದ್ದೀರಿ? ಇಲ್ಲಿರುವ ಪ್ರತಿಯೊಂದು ಗಿಡಮರವೂ ನನಗೆ ಚೆನ್ನಾಗಿ ಗೊತ್ತು. ನಿಮಗೆ ಯಾರು ಬೇಕೆಂದು ಹೇಳಿದರೆ ನಾನು ತೋರಿಸುತ್ತೇನೆ' ಎಂದು ಕೇಳಲು, ನಾನು 'ಸಿಂಹದ ಮುಖವೂ ಮನುಷ್ಯನ ದೇಹವೂ ಇರುವ ನರಸಿಂಹನಿಗಾಗಿ ಕಾದಿದ್ದೇನೆ' ಎಂದು ತಿಳುಹಿದೆ.

"ಆ ಬೇಡನು 'ಹುಟ್ಟಿದಾಗಿನಿಂದಲೂ ಇದೇ ಕಾಡಿನಲ್ಲಿ ವಾಸಿಸುತ್ತಿರುವೆನು. ಇದುವರೆಗೂ ಅಂತಹ ಪ್ರಾಣಿಯನ್ನು ಎಂದೂ, ಎಲ್ಲೂ ಕಂಡಿಲ್ಲ. ಆ ವಿಚಿತ್ರ ಪ್ರಾಣಿಯೂ ಈ ಕಾಡಿನಲ್ಲಿರುವುದು ನಿಜವೇ ಆದರೆ ನಾನು ಅದನ್ನು ಖಂಡಿತ ಹಿಡಿದು ತರುತ್ತೇನೆ' ಎಂದನು. ಅಂತಹ ಪ್ರಾಣಿಯಿರುವುದು ಸತ್ಯವೆಂದು ತಿಳಿದು ಅವನು 'ಎಷ್ಟೇ ಕಷ್ಟವಾಗಲಿ ಎಲ್ಲಿದ್ದರೂ ಅದನ್ನು ಈ ಸಂಜೆಯೊಳಗೆ ಹಿಡಿದು ತರುತ್ತೇನೆ' ಎಂದು ಹೇಳಿ ಹೊರಟುಹೋದನು.

"ಸಂಜೆಯ ಹೊತ್ತಿಗೆ ಆ ಬೇಡನು ಹಿಂತಿರುಗಿ ಬಂದು "ಸ್ವಾಮಿ ನೀವು ಹುಡುಕುತ್ತಿದ್ದವನನ್ನು ಕರೆದುಕೊಂಡು ಬಂದಿದ್ದೇನೆ. ಇವನನ್ನು ಹುಡುಕಿ ಹುಡುಕಿ ಸಾಕಾಯಿತು. ಸಂಜೆಯಾದರೂ ಸಿಗಲಿಲ್ಲ. ಆಗ ನಾನು ಆ ಪ್ರಾಣಿಯನ್ನೇ ಧ್ಯಾನಿಸುತ್ತಾ ನೀನು ಕಣ್ಣಿಗೆ ಕಾಣುತ್ತೀಯೋ ಅಥವಾ ತಲೆ ಕತ್ತರಿಸಿಕೊಳ್ಳಲೋ' ಎಂದು ಕತ್ತಿಯನ್ನು ಮೇಲೆತ್ತಿದೆ. ಆಗ ಪೊದೆಯೊಂದರಲ್ಲಿ ಏನೋ ವಿಚಿತ್ರ ಶಬ್ದವಾಯಿತು. ಹೋಗಿ ನೋಡಲು ಅಲ್ಲಿ ಇತ್ತು-ಆ ವಿಚಿತ್ರ ಪ್ರಾಣಿ-ಅದನ್ನು ಬಳ್ಳಿಯಿಂದ ಕಟ್ಟಿ

ತಂದಿದ್ದೇನೆ" ಎಂದು ಹೇಳಿದನು. ನಾನು ಸುತ್ತಲೂ ನೋಡಿದೆ. ಏನೂ ಕಾಣಿಸಲಿಲ್ಲ. ಆದರೆ ನರಸಿಂಹನ ವಿಚಿತ್ರ ಘರ್ಜನೆಯು ಮಾತ್ರ ಕೇಳಿಬರುತ್ತಿತ್ತು. ನರಸಿಂಹನ ಇರುವಿಕೆಯು ಗೊತ್ತಾದರೂ ಕಣ್ಣಿಗೆ ಕಾಣಿಸಲಿಲ್ಲ. ಅಗ ನಾನು 'ನರಸಿಂಹ' ವರುಷಗಳಿಂದ ಕಾದು ಕುಳಿತಿರುವ ನನಗೆ ನಿನ್ನ ದರ್ಶನವಿಲ್ಲ. ಈ ಬೇಡನಿಗೆ ನಿನ್ನ ದರ್ಶನವು ಲಭಿಸಿದೆ. ನನ್ನ ಕಣ್ಣಿಗೂ ಗೋಚರನಾಗು' ಎಂದು ಪ್ರಾರ್ಥಿಸಿದೆ.

" ನರಸಿಂಹಸ್ವಾಮಿಯು " ನೀನು ವರ್ಷಗಳಿಂದ ಜಪಿಸುತ್ತಿರುವೆ ನಿಜ. ಆದರೆ ಈ ಬೇಡನಿಗೆ ಈ ದಿವಸವೆಲ್ಲ ನನ್ನ ರೂಪಚಿಂತನೆಯನ್ನು ಬಿಟ್ಟು ಬೇರೆ ಜ್ಞಾನವೇ ಇಲ್ಲ. ಇವನ ಮನಸ್ಸನ್ನು ಪರೀಕ್ಷಿಸುವುದ ಕ್ಕಾಗಿ ಸಂಜೆಯವರೆಗೂ ಕಣ್ಣಿಗೆ ಕಾಣಲಿಲ್ಲ. ತಲೆಯನ್ನು ಕತ್ತರಿಸಿ ಕೊಳ್ಳಲುದ್ಯುಕ್ತನಾದಾಗ ನಾನು ಒಂದು ಪೊದೆಯಲ್ಲಿ ಕಾಣಿಸಿಕೊಂಡೆ. ನನ್ನನ್ನು ಗಿಡ-ಬಳ್ಳಿಗಳಿಂದ ಕಟ್ಟಿದಾಗ್ಯೂ ಅವನ ದೃಢವಾದ ಭಕ್ತಿಗಾಗಿ ಸುಮ್ಮನಿದ್ದೇನೆ. ಬೇರೆ ಎಲ್ಲವನ್ನೂ ಮರೆತು ನಿರ್ಮಲ ಚಿತ್ತದಿಂದ ಒಂದು ಕ್ಷಣಕಾಲ ನನ್ನನ್ನೇ ಚಿಂತಿಸಿದರೆ ಸಾಕು. ಹೀಗಿರುವಾಗ ನಿನಗೆ ಒಲಿಯದಿರುವೆನೇ ಪದ್ಮಪಾದ! ಈಗ ನಿನಗೆ ನನ್ನ ಇರುವಿಕೆಯು ಅನುಭವವಾಗಿದೆ. ಅದು ಸಾಕು. ನೀನು ಯಾವಾಗ ಸ್ಮರಿಸಿದರೆ ಆಗ ನಿನ್ನಲ್ಲಿ ಆವಿರ್ಭೂತನಾಗುತ್ತೇನೆ. ನಿನಗೆ ಮಂಗಳವಾಗುತ್ತದೆ" ಎಂದು ಆಶೀರ್ವದಿಸಿ ಅಂತರ್ಧಾನನಾದನು. ನನ್ನಲ್ಲಿ ಆವಿರ್ಭೂತ ನಾದ ಆ ನರಸಿಂಹ ಸ್ವಾಮಿಯೇ ಆ ಕಾಪಾಲಿಕ ಉಗ್ರಭೈರವನನ್ನು ಕೊಂದುದು."

ಪದ್ಮಪಾದರು ಹೇಳಿದ ಈ ಚರಿತ್ರೆಯನ್ನು ಕೇಳಿ ಶಂಕರರಿಗೆ ಆನಂದವಾಯಿತು. ನರಸಿಂಹಸ್ವಾಮಿಯನ್ನು ಮುಕ್ತಕಂಠದಿಂದ ಹೊಗಳಿ ಪದ್ಮಪಾದರನ್ನು ಕುರಿತು ಶಂಕರರು ಹೀಗೆ ಹೇಳಿದರು—

" ಪದ್ಮಪಾದ, ಪರಮಾತ್ಮನಿಗೆ ಬೇಕಾದುದು ಭಕ್ತಿ-ನಿಶ್ಚಲವಾದ ಭಕ್ತಿ. ರೀತಿ ನೀತಿಗಳಲ್ಲಿ ನೀನು ನಿಯಮದಂತೆ ಮಂತ್ರೋಪದೇಶ ವನ್ನು ಹೊಂದಿ ಅನೇಕ ಕಾಲ ಜಪಿಸಿದರೂ ಆ ಬೇಡನ ನಿಶ್ಚಲ ಭಕ್ತಿಯೇ ಮೇಲೆನಿಸಿತು. ಇದೇ ರೀತಿಯ ಭಕ್ತಿಯಿಂದ ಶಿವ ಸಾಕ್ಷಾತ್ಕಾರವನ್ನು ಹೊಂದಿದ ಇನ್ನೊಬ್ಬ ಬೇಡನ ಕಥೆಯನ್ನು ಹೇಳು ತ್ತೇನೆ ಕೇಳು.

" ಹಿಂದೆ ಕಣ್ಣಪ್ಪನೆಂಬ ಒಬ್ಬ ಬೇಡರವನಿದ್ದನು. ಪೂರ್ವ ಸಂಸ್ಕಾರ ಬಲದಿಂದ ಅವನು ಶಿವಭಕ್ತನಾದನು. ಒಂದು ದಿವಸ ಅವನಿಗೆ ಯಾವ ಬೇಟೆಯೂ ಸಿಗಲಿಲ್ಲವಾದ್ದರಿಂದ ಬೇಟೆಗಾಗಿ ಹುಡುಕುತ್ತಾ ಹುಡು ಕುತ್ತಾ ಕಾಡಿನಲ್ಲಿ ಬಹಳ ದೂರ ಬಂದುಬಿಟ್ಟನು. ಅಲ್ಲಿ ಒಂದು ಶಿವಾ ಲಯವು ಕಾಣಿಸಿತು. ಕಣ್ಣಪ್ಪನು ದೇಗುಲದ ಒಳಹೊಕ್ಕು ಶಿವಲಿಂಗದ ಮೇಲಿನ ಬಿಲ್ವಪತ್ರಾದಿಗಳನ್ನು ಕಂಡು ಅದನ್ನು ಕಸವೆಂದು ಭಾವಿಸಿ ದೂರ ತಳ್ಳಿದನು. ಹಚ್ಚಿರುವ ಗಂಧವನ್ನು ನೋಡಿ " ಯಾರೋ ಏನನ್ನೋ ಬಳಿದಿದ್ದಾರೆ " ಎಂದುಕೊಂಡು ಅದನ್ನು ತೊಳೆಯುವುದಕ್ಕೆ ನೀರನ್ನು ತರಲು ಹೊರಟನು. ಹಾಗೆ ಹೋದಾಗ ಒಂದು ಜಿಂಕೆಯು ಸಿಕ್ಕಿತು. " ಆಹಾ ! ನಮ್ಮ ಶಿವನು ಎಷ್ಟು ಒಳ್ಳೆಯವನು. ಹಸಿದಿರುವೆ ನೆಂದು ನಾನಿರುವಲ್ಲಿಗೇ ಜಿಂಕೆಯನ್ನು ಕಳುಹಿಸಿದ್ದಾನೆ " ಎಂದುಕೊಂಡು ಅದನ್ನು ಕೊಂದು ತಂದನು.

" ನೀರನ್ನು ತರುವುದಕ್ಕೆ ಅವನ ಹತ್ತಿರ ಯಾವ ಪಾತ್ರೆಯೂ ಇರಲಿಲ್ಲವಾದ್ದರಿಂದ ನೀರನ್ನು ಬಾಯಲ್ಲಿಯೇ ತುಂಬಿಕೊಂಡು ಬಂದನು. ಆ ನೀರನ್ನು ಲಿಂಗದ ಮೇಲೆ ಉಗುಳಿ ಗಂಧವನ್ನು ತೊಳೆದನು. ಭಕ್ತಿ ಯಿಂದ ಉಗುಳಿದ ನೀರು ಈಶ್ವರನಿಗೆ ಅಭಿಷೇಕಕ್ಕಿಂತಲೂ ಪ್ರಿಯ ವಾಗಿ ತೋರಿತು. ಆ ಬೇಡರ ಕಣ್ಣಪ್ಪನು ತಾನು ತಂದಿದ್ದ ಜಿಂಕೆಯ

ಮಾಂಸವನ್ನು ಭಕ್ತ್ಯಾತಿಶಯದಿಂದ ಈಶ್ವರನ ಮುಂದಿಟ್ಟು "ದೇವಾ, ತೆಗೆದುಕೋ" ಎಂದು ಅರ್ಪಿಸಿದನು.

"ಕಣ್ಣಪ್ಪನು ಆ ಮಾಂಸವನ್ನು ತಿಂದು ಲಿಂಗದ ಕಡೆಗೆ ನೋಡಿದ. ಲಿಂಗದ ಬಲಗಣ್ಣಿನಿಂದ ನೀರುದುರುತ್ತಿತ್ತು. ಈಶ್ವರನಿಗೆ ಕಣ್ಣು ನೋವಿರಬಹುದೆಂದು ಯೋಚಿಸಿ ಕಣ್ಣಪ್ಪನು ತನ್ನಲ್ಲಿದ್ದ ಬಾಣದಿಂದ ತನ್ನ ಬಲಗಣ್ಣನ್ನು ಕಿತ್ತು ಆ ಲಿಂಗದ ಕಣ್ಣಿನ ಜಾಗದಲ್ಲಿ ಇಟ್ಟನು. ಈಶ್ವರನ ಕಣ್ಣಿನಲ್ಲಿ ಕಣ್ಣೀರು ಸುರಿಯುವುದು ನಿಂತಿತು. ಕಣ್ಣಪ್ಪನಿಗೆ ಸಂತೋಷವಾಯಿತು. ಅನಂತರ ಲಿಂಗದ ಎಡಗಣ್ಣಿನಿಂದ ಕಂಬನಿ ಸುರಿಯ ತೊಡಗಿತು. ಲಿಂಗದ ಕಣ್ಣು ಎಲ್ಲಿರುವುದೆಂದು ಗುರುತು ಹಚ್ಚುವುದಕ್ಕಾಗಿ ತನ್ನ ಬಲಗಾಲಿನ ಹೆಬ್ಬೆರಳನ್ನು ಆ ಜಾಗದಲ್ಲಿ ಒತ್ತಿಹಿಡಿದು ಆ ಬೇಡನು ತನ್ನ ಎಡಗಣ್ಣನ್ನೂ ಕಿತ್ತಿಟ್ಟನು. ಈಶ್ವರನು ಹಾಗೆ ಮಾಡಿದುದು ಬೇಡನ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿಯೇ ಅಲ್ಲವೇ! ತನ್ನ ಎರಡು ಕಣ್ಣುಗಳನ್ನೂ ಹಿಂದು-ಮುಂದು ನೋಡದೆ ಕಿತ್ತುಕೊಟ್ಟ ಆ ಬೇಡನ ಭಕ್ತಿಗೆ ಮೆಚ್ಚಿ ಈಶ್ವರನು ಪ್ರತ್ಯಕ್ಷನಾದನು.

"'ಏನು ವರಬೇಕೋ ಕೇಳಿಕೋ' ಎಂದು ಈಶ್ವರನು ಬೇಡನಿಗೆ ಹೇಳಲು, ಅವಿದ್ಯಾವಂತನಾದ ಅವನು 'ನಿನ್ನ ಕಾಲು ನನ್ನ ತಲೆಯ ಮೇಲಿರಲಿ' ಎನ್ನುವುದಕ್ಕೆ ಬದಲು 'ಸದಾ ನನ್ನ ಕಾಲು ನಿನ್ನ ತಲೆಯ ಮೇಲಿರಲಿ' ಎಂದು ಕೇಳಿಕೊಂಡನು. ಭಕ್ತಪರಾಧೀನನಾದ ಶಂಕರನು ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಅದರಂತೆ ಶಿವನು ಇಂದಿಗೂ ಪಾದಗಳ ಆಕಾರವನ್ನು ಹೋಲುವ ತುಂಬೆಯ ಹೂವನ್ನು ತನ್ನ ತಲೆಯ ಮೇಲೆ ಧರಿಸುತ್ತಾನೆ.

‘ಪದ್ಮಪಾದ ! ಈ ಕಣ್ಣಪ್ಪನ ಚರಿತ್ರೆಯಿಂದ ಭಕ್ತಿಗಿರುವ ಪ್ರಾಶಸ್ತ್ಯವು ಚೆನ್ನಾಗಿ ತಿಳಿಯುವುದು. ಈ ಶುದ್ಧ ಭಕ್ತಿಯಿಂದ ಚಿತ್ತ ಶುದ್ಧಿಯಾಗುವುದು. ಚಿತ್ತಶುದ್ಧಿಯು ಜ್ಞಾನಾರ್ಜನೆಗೆ ಅತಿ ಮುಖ್ಯ ವಾದುದು. ಜ್ಞಾನದಿಂದ ಮುಕ್ತಿ ದೊರೆಯುವುದು.”

ಶಂಕರರಿಂದ ಈ ಕಥೆಯನ್ನು ಕೇಳಿ ಪದ್ಮಪಾದಾದಿ ಶಿಷ್ಯರು ಸಂತಸಪಟ್ಟರು.

## ಪ್ರಕರಣ ೧೩

## ಶಂಕರರು ಸಂಚಾರದಲ್ಲಿ

ಶ್ರೀಶೈಲವನ್ನು ಬಿಟ್ಟು ಹೊರಟ ಶಂಕರರು ತಮ್ಮ ಶಿಷ್ಯರೊಡನೆ ಭೂಕೈಲಾಸವೆಂದು ಹೆಸರು ಪಡೆದಿರುವ ಗೋಕರ್ಣ ಕ್ಷೇತ್ರಕ್ಕೆ ಬಂದರು

ಹಿಂದೆ ರಾವಣನು ತನ್ನ ತಾಯಿಗೆ ಕೊಟ್ಟ ಮಾತನ್ನು ಪಾಲಿಸಲು ಈಶ್ವರನನ್ನು ಕುರಿತು ಅತಿಘೋರವಾದ ತಪಸ್ಸನ್ನು ಮಾಡಿದನು. ಆಗ ಆ ತಪಸ್ಸಿಗೆ ಮೆಚ್ಚಿ, ಪರಮೇಶ್ವರನು ಪ್ರತ್ಯಕ್ಷನಾದನು. ಆಗ ರಾವಣನು ಶಂಕರನ ಹೃದಯಸ್ಥವಾದ ಆತ್ಮಲಿಂಗವನ್ನೇ ಬೇಡಿದನು. ಶಿವನು ಹಿಂದುಮುಂದು ನೋಡದೆ ಆತ್ಮಲಿಂಗವನ್ನೂ ಸಹ ಕೊಟ್ಟು ತನ್ನ ಭಕ್ತಪರಾಧೀನತೆಯನ್ನು ವ್ಯಕ್ತಪಡಿಸಿದನು. ಆತ್ಮಲಿಂಗವು ಈಶ್ವರನ ಹೃದಯದಿಂದ ಅಗಲಿದುದರಿಂದ ಆತನ ಕಾಂತಿಯು ಕುಂದಿತು. ದೇವತೆಗಳು ವ್ಯಸನಪಟ್ಟರು. ಆಗ ಆತ್ಮಲಿಂಗವು ರಾವಣನ ಸ್ವಾಧೀನವಾಗದಂತೆ ಮಾಡಲು ನಾರದರು ಒಂದು ಉಪಾಯ ಮಾಡಿದರು.

ನಾರದರು ಗಣಪತಿಯನ್ನು ಕರೆದು, “ಹೇ ಗಣಪ! ನೀನು ವಟು ರೂಪವನ್ನು ಧರಿಸಿ ರಾವಣನ ಬಳಿಗೆ ಹೋಗು. ಈಗ ಸಂಧ್ಯಾಕಾಲ. ರಾವಣನು ಸಂಧ್ಯಾವಂದನೆಯನ್ನು ಮಾಡಬೇಕಾಗಿರುವುದರಿಂದ ಕೈಯೊಳಗಿರುವ ಲಿಂಗವನ್ನು ಯಾರ ಕೈಯಲ್ಲಿ ಕೊಡಲಿ ?” ಎಂದು

ಯೋಚಿಸುತ್ತಿದ್ದಾನೆ. ಅದನ್ನು ನೆಲನ ಮೇಲೆ ಮಾತ್ರ ಇಡುವ ಹಾಗಿಲ್ಲ. ನೆಲದ ಮೇಲೆ ಇಟ್ಟ ಮೇಲೆ ಅದನ್ನು ಮತ್ತೆ ಮೇಲಕ್ಕೆ ಎತ್ತುವುದಕ್ಕೆ ಆಗುವುದಿಲ್ಲ. ನಿನ್ನನ್ನು ನೋಡಿ ರಾವಣನು ಆತ್ಮಲಿಂಗವನ್ನು ನಿನ್ನ ಕೈಯಲ್ಲಿಡುವನು. ಅದನ್ನು ಕೆಳಗಿಟ್ಟು ಬಂದುಬಿಡು" ಎಂದು ಹೇಳಿದನು.

ಅದರಂತೆ ಗಣಪತಿಯು ವಟುರೂಪವನ್ನು ಧರಿಸಿ, ಆತ್ಮಲಿಂಗ ವನ್ನು ತೆಗೆದುಕೊಂಡು ಹೋಗುತ್ತಿದ್ದ ರಾವಣನ ಬಳಿಗೆ ಬಂದನು. "ಲಿಂಗವನ್ನು ಕೆಳಗಿಡದೆ ಸಂಧ್ಯಾವಂದನೆಯನ್ನು ಹೇಗೆ ಮಾಡುವುದು ?" ಎಂದು ಯೋಚಿಸುತ್ತಿದ್ದ ಸಮಯಕ್ಕೆ ಸರಿಯಾಗಿ ಬಂದ ಆ ವಟುವನ್ನು ಕಂಡು ರಾವಣನಿಗೆ ಆನಂದವಾಯಿತು. ರಾವಣನು ಆ ವಟುವನ್ನು ಕುರಿತು "ಎಲೋ ಮಗು ! ಈ ಲಿಂಗವನ್ನು ಕೈಯಲ್ಲಿಯೇ ಹಿಡಿದು ಕೊಂಡಿರು. ಬೇಗನೆ ಹಿಂತಿರುಗಿ ಬಂದು ಬಿಡುತ್ತೇನೆ. ನಾನು ಬರುವ ವರೆಗೂ ಲಿಂಗವನ್ನು ಕೆಳಗಿಡಬೇಡ" ಎಂದು ಆತ್ಮಲಿಂಗವನ್ನು ಗಣ ಪತಿಯ ಕೈಯಲ್ಲಿಟ್ಟನು. ಅದಕ್ಕೆ ವಟುರೂಪದ ಗಣಪತಿಯು "ನಾನು ಮೂರು ಬಾರಿ ನಿನ್ನ ಹೆಸರನ್ನು ಕೂಗುತ್ತೇನೆ. ನೀನು ಅದರೊಳಗಾಗಿ ಬಂದು ಬಿಡಬೇಕು. ಹಾಗೆ ಬಾರದಿದ್ದಲ್ಲಿ ಇದನ್ನು ಕೆಳಗಿಟ್ಟು ಬಿಡು ತ್ತೇನೆ" ಎಂದನು. ರಾವಣನು ಒಪ್ಪಿ ಹೊರಟುಹೋದನು.

ಸಂಧ್ಯಾವಂದನೆಗಾಗಿ ಹೋದ ರಾವಣನು ಹಿಂತಿರುಗುವುದಕ್ಕೆ ಮುಂಚಿತವಾಗಿಯೇ ಗಣಪತಿಯು ರಾವಣ ! ರಾವಣ ! ! ರಾವಣ ! ! ! ಎಂದು ಮೂರು ಬಾರಿ ಕೂಗಿದನು. ಅವನು ಬಾರದಿರಲು ಆತ್ಮಲಿಂಗ ವನ್ನು ಕೆಳಗಿಟ್ಟು ದೇವಲೋಕಕ್ಕೆ ಹೊರಟುಹೋದನು.

ರಾವಣನು ಹಿಂತಿರುಗಿ ಬಂದು ನೋಡಿದಾಗ ಅಲ್ಲಿ ಆ ವಟುವು ಕಾಣಿಸಲಿಲ್ಲ. ಲಿಂಗವು ನೆಲದ ಮೇಲಿಡಲ್ಪಟ್ಟಿತ್ತು. ರಾವಣನು ತನ್ನ

ಬಲವನ್ನೆಲ್ಲ ಪ್ರಯೋಗಿಸಿ ಅದನ್ನು ಮೇಲಕ್ಕೆ ಎತ್ತಲು ಯತ್ನಿಸಿದನು. ಆದರೆ ಅದು ನಿಷ್ಫಲವಾಯಿತು. ಹಾಗೆ ಬಲಪ್ರಯೋಗ ಮಾಡುತ್ತಿದ್ದಾಗ ಲಿಂಗದ ಒಂದು ಭಾಗವು ಮುರಿದುಹೋಗಿ ಅದು ಹಸುವಿನ ಕಿವಿಯ (ಗೋ-ಕರ್ಣದ) ಆಕಾರವನ್ನು ಹೊಂದಿತು. ಆದುದರಿಂದ ಆ ಲಿಂಗಕ್ಕೆ 'ಗೋಕರ್ಣೇಶ್ವರ' ಎಂದೂ ಆ ಸ್ಥಳಕ್ಕೆ 'ಗೋಕರ್ಣ ಕ್ಷೇತ್ರ'ವೆಂದೂ ಹೆಸರಾಯಿತು.

ಶಂಕರರು ಇಂತಹ ಪವಿತ್ರ ಕ್ಷೇತ್ರದಲ್ಲಿ ಕೆಲಕಾಲವಿದ್ದು ಗೋಕರ್ಣೇಶ್ವರನನ್ನು ಆರಾಧಿಸಿ ವಿಧವಿಧವಾಗಿ ಸ್ತುತಿಸಿದರು ಅಲ್ಲಿಂದ ಮುಂದೆ ಹೊರಟು ಅದಕ್ಕೆ ಸಮೀಪದಲ್ಲಿಯೇ ಇದ್ದ ವಕ್ರತುಂಡ ಕ್ಷೇತ್ರವನ್ನು ತಲುಪಿದರು. ಅಲ್ಲಿನ ನಿವಾಸಿಗಳು ಗಣಪತಿಯನ್ನು ಆರಾಧಿಸುತ್ತಿದ್ದುದರಿಂದ ಅವರನ್ನು 'ಗಾಣಾಪತ್ಯ'ರೆಂದು ಕರೆಯುತ್ತಿದ್ದರು. ಅವರಲ್ಲಿ ಗುರುವು ಉಂಡು ಮಿಕ್ಕುದುದನ್ನು ತಿನ್ನುವ ಒಂದು ದುರಭ್ಯಾಸವಿದ್ದಿತು. ಶಂಕರರು ಈ ಕೆಟ್ಟ ಪದ್ಧತಿಯನ್ನು ನೋಡಿ ತಪ್ಪಿಸಿದರು. ಶಂಕರರು ಖಂಡಿಸಿದ ಷಣ್ಮತಗಳಲ್ಲಿ ಇದೂ ಒಂದು.

ಶ್ರೀ ಶಂಕರಾಚಾರ್ಯರು ಶಿಷ್ಯರಿಂದೊಡಗೂಡಿ ಅಲ್ಲಿಂದ 'ಶಂಕರ ನಾರಾಯಣ' ಎಂಬ ಒಂದು ಪುಣ್ಯಸ್ಥಳಕ್ಕೆ ಬಂದರು. ಅಲ್ಲಿ ಹರಿಹರ ಸ್ವರೂಪವುಳ್ಳ ಮೂರ್ತಿಯನ್ನು ನೋಡಿ ಆನಂದಪಟ್ಟು ಪರಮಾತ್ಮನನ್ನು ಭಕ್ತಿಯಿಂದ ಅರ್ಚಿಸಿದರು. ಹರಿಹರರಲ್ಲಿ ಭೇದವಿಲ್ಲವೆಂಬ ವಿಷಯವನ್ನು ಅಲ್ಲಿನ ಜನಗಳಿಗೆ ಬೋಧಿಸಿದರು.

ಶಂಕರರು ಅಲ್ಲಿಂದ ಹೊರಟುಬರುತ್ತಿರುವಾಗ ದಾರಿಯಲ್ಲಿ ಒಂದು ದುಃಖಪೂರಿತ ದೃಶ್ಯವನ್ನು ಕಂಡರು. ಮಗುವಿನ ಶವವೊಂದನ್ನು ತಮ್ಮ ತೊಡೆಯಲ್ಲಿಟ್ಟುಕೊಂಡು ವಿಪ್ರದಂಪತಿಗಳು ರೋಧಿಸುತ್ತಿದ್ದರು. ಅವರಿಗಿದ್ದುದು ಅದೊಂದೇ ಒಂದು ಮಗು. ಅವರ ದುಃಖವನ್ನು

ನೋಡಿ ಮನಕರಗಿದ ಶಂಕರರು ತಾವೂ ಅಳುವುದಕ್ಕೆ ಮೊದಲಿಟ್ಟರು. ಆಗ ಅಲ್ಲಿದ್ದ ಎಲ್ಲ ಜನರೂ ಆಶ್ಚರ್ಯಪಡುವಂತೆ ಆಕಾಶವಾಣಿಯು ಕೇಳಿಬಂತು.

"ಎಲೈ ಮುನಿಪುಂಗವನೇ! ನಿನ್ನ ಮರುಕವು ವ್ಯರ್ಥವಾಗಲಾರದು. ಮೃತನನ್ನು ಬದುಕಿಸುವ ಶಕ್ತಿ ನಿನಗುಂಟು" ಈ ಅಶರೀರವಾಣಿಯನ್ನು ಕೇಳಿ ಶಂಕರರು ಮಗುವನ್ನು ಬದುಕಿಸುವಂತೆ ಮಹದೇವನನ್ನು ಪ್ರಾರ್ಥಿಸಿ ತಮ್ಮ ಕಮಂಡಲುವಿನ ಜಲವನ್ನು ಮಗುವಿನ ಮೇಲೆ ಪ್ರೋಕ್ಷಿಸಿದರು. ಸಿಂಚಿಸಿದ ನೀರು ಮೈಮೇಲೆ ಬೀಳುವುದೇ ತಡ ಆ ಮಗುವು ನಿದ್ದೆಯಿಂದೇಳುವಂತೆ ಎದ್ದು ಕುಳಿತಿತು. ಅದನ್ನು ಕಂಡು ಎಲ್ಲರಿಗೂ ಅಮಿತಾನಂದವಾಯಿತು. ಆ ಮಗುವಿನ ತಂದೆ-ತಾಯಿಗಳು ಶಂಕರಾಚಾರ್ಯರನ್ನು ನಮಸ್ಕರಿಸಿ ಕೊಂಡಾಡಿದರು. ಅವರ ಅಪ್ಪಣೆಯನ್ನು ಪಡೆದು ತಮ್ಮ ಮನೆಗೆ ತೆರಳಿದರು.

ಅನಂತರ ಆಚಾರ್ಯರು ಸಶಿಷ್ಯರಾಗಿ ಹೊರಟು ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ 'ಕೊಲ್ಲೂರು' ಎಂಬ ದೇವೀ ಕ್ಷೇತ್ರಕ್ಕೆ ಬಂದರು. ಆ ಪಟ್ಟಣದ ಹೊರ ಉದ್ಯಾನದಲ್ಲಿ ಕಂಗೊಳಿಸುತ್ತಿದ್ದ ಮೂಕಾಂಬಿಕಾ ದೇವಾಲಯಕ್ಕೆ ಬಂದು ದೇವಿಯ ದರ್ಶನದಿಂದ ಆನಂದಹೊಂದಿ ದೇವಿಯನ್ನು ಅನೇಕ ಬಗೆಯಾಗಿ ಸ್ತುತಿಸಿದರು.

ಅಲ್ಲಿಂದ ಬಲಿಪುರವೆಂಬ ಅಗ್ರಹಾರಕ್ಕೆ ಬಂದು ಅಲ್ಲಿದ್ದ ಒಂದು ಉಪವನದಲ್ಲಿ ತಂಗಿದರು. ಆ ಅಗ್ರಹಾರದಲ್ಲಿ ಸತ್ಕುಲ ಪ್ರಸೂತನೂ ವೇದಾಧ್ಯಯನ ಸಂಪನ್ನನೂ ಆದ ಪ್ರಭಾಕರನೆಂಬ ಒಬ್ಬ ಬ್ರಾಹ್ಮಣ ಶ್ರೇಷ್ಠನಿದ್ದನು. ಆತನಿಗಿದ್ದುದು ಒಬ್ಬನೇ ಒಬ್ಬ ಮಗ. ಆ ನಗುವ ಮುಖದಲ್ಲಿ ಬ್ರಹ್ಮ ತೇಜಸ್ಸು ಉಕ್ಕಿ ಹರಿಯುತ್ತಿತ್ತು. ಅವನಿಗೆ ಉಪನಯನವೂ ಆಗಿತ್ತು. ಆದರೆ ಅವನು ಹುಟ್ಟಿದಂದಿನಿಂದ ಯಾರೊಡನೆ

ಯಾದರೂ ಮಾತನಾಡಿದುದಾಗಲೀ, ಬೇರೆಯವರೊಡನೆ ಸೇರಿದುದಾಗಲೀ, ನಕ್ಕದುದಾಗಲೀ ಇರಲಿಲ್ಲ. ಯಾವಾಗಲೂ ಜಡನಂತೆ ವರ್ತಿಸುತ್ತಿದ್ದನು. ಇಂತಹ ಮಗನನ್ನು ನೋಡಿ ತಂದೆಗೆ ಬಹಳ ದುಃಖವಾಗುತ್ತಿತ್ತು.

ಹೀಗಿರುವಾಗ ಮಹಿಮಾಪುರುಷರಾದ ಶಂಕರರು ತಮ್ಮ ಊರಿಗೆ ಬಂದ ಸಮಾಚಾರ ತಿಳಿಯಿತು. ಪ್ರಭಾಕರನು ಶಂಕರರ ದರ್ಶನವನ್ನು ತೆಗೆದುಕೊಳ್ಳುವುದಕ್ಕಾಗಿ ತನ್ನ ಮಗನೊಡನೆ ಅವರಲ್ಲಿಗೆ ಬಂದನು. ತನ್ನ ಮಗನನ್ನು ಶಂಕರರ ಪಾದಗಳ ಬಳಿ ಕುಳ್ಳಿರಿಸಿ ಪ್ರಭಾಕರಭಟ್ಟನು "ಸ್ವಾಮಿ, ಈ ನನ್ನ ಒಬ್ಬನೇ ಮಗನು ಮೂಕನಂತೆಯೂ, ಜಡನಂತೆಯೂ ವರ್ತಿಸುತ್ತಿದ್ದಾನೆ. ಮುಖದಲ್ಲಿಯಾದರೋ ಬ್ರಹ್ಮಜ್ಞಾನಿಯ ವರ್ಚಸ್ಸು ಇದೆ. ಇವನ ವಿಚಾರ ನನಗೆ ಏನೂ ತಿಳಿಯದ ಹಾಗೆ ಇದೆ. ನೀವು ಈ ಬಾಲಕನಿಗೆ ವಾಕ್ಸಿದ್ಧಿಯನ್ನು ಕರುಣಿಸಿ, ಕೃಪೆ ತೋರಬೇಕು" ಎಂದು ಪ್ರಾರ್ಥಿಸಿಕೊಂಡನು.

ಶಂಕರರು ಆ ಬ್ರಾಹ್ಮಣನ ಪ್ರಾರ್ಥನೆಯನ್ನು ಲಾಲಿಸಿ ಆತನನ್ನು ಸಂತೈಸಿದರು. ಮತ್ತು ನಗುತ್ತಾ ಆ ಬಾಲಕನನ್ನು ಕುರಿತು "ಎಲೈ ಬಾಲಕನೇ, ನೀನು ಯಾರು? ಏಕೆ ಜಡನಾಗಿದ್ದೀಯೇ?" ಎಂದು ಪ್ರಶ್ನಿಸಿದರು.

ಶಂಕರರ ಮುಖವನ್ನು ನೋಡುತ್ತಲೇ ನಗುವುದಕ್ಕೆ ಪ್ರಾರಂಭಿಸಿದ ಆ ಮಗುವು ನಿಮಿಷಕಾಲವೂ ಯೋಚಿಸದಂತೆ ಹೇಳಿತು:—

'ನಾಹಂ ಜಡ' ನಾನು ಜಡನಲ್ಲ. ಯತೀಶ್ವರನೇ! ನಾನು ಸಚ್ಚಿದಾನಂದ ರೂಪನು. ವಿಶ್ವದ ಸೃಷ್ಟಿ, ಸ್ಥಿತಿ, ಲಯ ಎಂಬ ಮೂರು ಕಾರ್ಯಗಳಿಗೆ ಕಾರಣೀಭೂತವಾದ ಮತ್ತು ಅಖಂಡವಾದ ಚೈತನ್ಯ

ಸ್ವರೂಪನು. ನಿರ್ವಿಕಾರವಾದ ಪರಬ್ರಹ್ಮ ವಸ್ತುವೇ ನಾನಾಗಿರುವೆನು.

ನಾಹಂ ಸುರೋ ನಮನುಜೋ ಭುಜಗೋ ನ ಯಕ್ಷೋ
ನೋ ಗುಹ್ಯಕೋ ನ ದನುಜೋ ನಚ ಕಿನ್ನರೋಽಸ್ಮಿ ।
ನಾಂಧೋ ಸ್ಮ್ಯಹಂ ನ ಬಧಿರಃ ನ ಕುಣಿರ್ನ ಪಂಗುಃ
ಏಷೋಽಸ್ಮಿ ಶಂಕರ ಗುರೋ ತವಬೋಧ ರೂಪಃ ॥

ಹೇ ಶಂಕರ ಗುರೋ! ನಾನು ಸುರನಲ್ಲ, ನರನಲ್ಲ ; ಸರ್ಪವಲ್ಲ ; ಯಕ್ಷ, ಗುಹ್ಯಕ, ದನುಜ, ಕಿನ್ನರರೆಂಬ ನಾಮಭೇದಕ್ಕೆ ಒಳಗಾದವನಲ್ಲ. ನಾನು ಕುರುಡನಲ್ಲ, ಕಿವುಡನಲ್ಲ. ರೋಗಾದಿಗಳಿಂದ ಡೊಂಕಾದ ಕೈಗಳನ್ನುಳ್ಳವನಲ್ಲ ; ಕುಂಟನೂ ಅಲ್ಲ. ಹೇ ಗುರೋ! ನೀವು ಯಾವ ಪರಬ್ರಹ್ಮ ತತ್ವವನ್ನು ಎಲ್ಲರಿಗೂ ಬೋಧಿಸುತ್ತಿರುವಿರೋ ಆ ಪರಬ್ರಹ್ಮ ವಸ್ತುವೇ ನಾನಾಗಿದ್ದೇನೆ"

ಎಂದೂ ಮಾತನಾಡದ ಆ ಬಾಲಕನು, ಅಂದು ಮಾತನಾಡಿದುದನ್ನು ಕೇಳಿ ಪ್ರಭಾಕರ ಭಟ್ಟರಿಗೆ ಅತ್ಯಾನಂದವಾಯಿತು. ಎಲ್ಲರೂ ಆಶ್ಚರ್ಯ-ಆನಂದದಿಂದ ಕೂಡಿದರು. ಆಗ ಶಂಕರರು ತಮ್ಮ ಜ್ಞಾನ ದೃಷ್ಟಿಯಿಂದ ಆ ಬಾಲಕನ ಪೂರ್ವೇತಿಹಾಸವನ್ನು ತಿಳಿದು ಹೀಗೆ ಹೇಳಿದರು.

"ಹಿಂದೆ ಮಹಾ ತಪಸ್ವಿಯೂ, ಯೋಗಿಯೂ ಆದ ಒಬ್ಬನು ಒಂದು ನದಿಯ ದಡದಲ್ಲಿ ಕುಳಿತು ನಿರ್ಮಲವಾದ ವಾತಾವರಣದಲ್ಲಿ ತಪಸ್ಸು ಮಾಡುತ್ತಿದ್ದನು. ಒಂದು ದಿವಸ ಎಂದಿನಂತೆ ಆ ಋಷಿಯು ಸಮಾಧಿಸ್ಥನಾಗಿರುವಾಗ ಒಬ್ಬ ಹೆಂಗಸು ತನ್ನ ಮಗುವಿನೊಂದಿಗೆ ಸ್ನಾನ ಮಾಡುವುದಕ್ಕಾಗಿ ಅಲ್ಲಿಗೆ ಬಂದಳು. ಪಕ್ಕದಲ್ಲಿ ಬೇರೆ ಯಾರೂ ಇರಲಿಲ್ಲವಾದುದರಿಂದ ಆಕೆಯು ತನ್ನ ಮಗುವನ್ನು ಆ ಮುನಿಯ ಮುಂದೆ

ಮಲಗಿಸಿ " ಸ್ವಾಮಿಾ, ನಾನು ಸ್ನಾನ ಮಾಡುವುದಕ್ಕಾಗಿ ಹೋಗುತ್ತೇನೆ. ದಯೆಯಿಟ್ಟು ನಾನು ಹಿಂತಿರುಗಿ ಬರುವವರೆಗೂ ಈ ಮಗುವನ್ನು ನೋಡಿಕೊಂಡಿರಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಹೇಳಿ ಹೊರಟು ಹೋದಳು.

ಹೊರ ಪ್ರಪಂಚದ ಜ್ಞಾನವೇ ಇಲ್ಲದ ಆ ಮುನಿಗೆ ಆಕೆಯ ಮಾತು ಹೇಗೆ ಕೇಳಿಸಬಲ್ಲುದು! ಸಕಲೇಂದ್ರಿಯಗಳು ಇದ್ದಾಗ್ಯೂ ಮನಸ್ಸಿನ ಸಂಪರ್ಕವಿಲ್ಲದಿರುವಾಗ ಅವು ಏನನ್ನೂ ಮಾಡಲಾರವಾದುದರಿಂದ ಆ ತಪಸ್ವಿಗೆ ಆ ಮಗುವಿನ ಅರಿವೇ ಆಗಲಿಲ್ಲ. ಆ ಮಗುವಾದರೋ ಆಡುತ್ತಾ ಆಡುತ್ತಾ ನದಿಯಲ್ಲಿ ಬಿದ್ದು ಪ್ರಾಣ ಬಿಟ್ಟಿತು.

ತಾಯಿಯು ಹಿಂತಿರುಗಿ ಬಂದು ನೋಡಿದಾಗ ಮಗುವು ನದಿಯ ದಡದಲ್ಲಿ ಸತ್ತುಬಿದ್ದಿತ್ತು. ಆಕೆಯು ಆ ಸತ್ತ ಮಗುವನ್ನು ಎತ್ತಿಕೊಂಡು ಬಂದು ಮುನಿಯ ಮುಂದೆ ರೋಧಿಸತೊಡಗಿದಳು. ಮುನಿಯು ಸಂತಾಪ ಪಟ್ಟು ನಡೆದುದೆಲ್ಲವನ್ನೂ ತನ್ನ ಜ್ಞಾನದೃಷ್ಟಿಯಿಂದ ನೋಡಿ ತಿಳಿದು ಕೊಂಡನು. ಆಕೆಯನ್ನು ಬಹಳವಾಗಿ ಸಂತೈಸಿದನು. ಅನಂತರ ಆ ಮಗುವನ್ನು ಬದುಕಿಸುವುದಕ್ಕಾಗಿ 'ಪರಕಾಯ ಪ್ರವೇಶ' ವೆಂಬ ವಿದ್ಯೆಯ ಮಹಿಮೆಯಿಂದ ತಾನೇ ಆ ಶಿಶುವಿನ ಮೃತದೇಹವನ್ನು ಹೊಕ್ಕನು. ಕೂಡಲೆ ಮಗುವು ಚೈತನ್ಯ ಹೊಂದಿ ಎದ್ದು ಕುಳಿತು ಕೊಂಡಿತು, ಆ ಮಗುವೇ ಈ ಮಗುವು. ಈತನು ಹೊರಗಿನ ಪ್ರಪಂಚದಲ್ಲಿ ಸ್ವಲ್ಪವೂ ಮನಸ್ಸಿಲ್ಲದವನಾದುದರಿಂದ ಜಡನಂತೆ ತೋರು ತ್ತಿದ್ದನು. ತನಗೆ ಬೇಕಾದ ವಿಷಯವನ್ನು ಕುರಿತು ಚರ್ಚಿಸುವವರು ಯಾರೂ ಇರಲಿಲ್ಲವಾದುದರಿಂದ ಮೂಕನಂತೆ ನಟಿಸುತ್ತಿದ್ದನು. ಈಗ ಇವನಿಗೆ ಇಷ್ಟವಾದ ವಿಷಯದಲ್ಲಿ ಪ್ರಶ್ನೆ ಹಾಕುತ್ತೇನೆ, ನೋಡಿ,

ಹೇಗೆ ಉತ್ತರ ಕೊಡುತ್ತಾನೆ" ಹೀಗೆಂದು ಶಂಕರರು ಕೆಲವು ಪ್ರಶ್ನೆಗಳನ್ನು ಕೇಳಿದರು.

ಪ್ರಶ್ನೆ—ಮಗು! ನಿನ್ನ ಜನ್ಮ ಸ್ಥಳವಾವುದು?

ಉತ್ತರ—ಹದಿನಾಲ್ಕು ಲೋಕಗಳನ್ನೊಳಗೊಂಡ ಈ ವಿಶ್ವವೇ ನನ್ನ ಜನ್ಮಸ್ಥಳ.

ಪ್ರಶ್ನೆ—ನೀನು ಎಲ್ಲಿಂದ ಬಂದೆ? ಎಲ್ಲಿಗೆ ಹೋಗುವೆ?

ಉತ್ತರ—ನಾನು ಎಲ್ಲಿಂದಲೂ ಬಂದಿಲ್ಲ; ಎಲ್ಲಿಗೂ ಹೋಗುವುದಿಲ್ಲ. ಎಲ್ಲೆಲ್ಲಿಯೂ ನಾನೇ ಇರುವಾಗ ಹೋಗುವುದೆಲ್ಲಿಗೆ? ಬರುವುದೆಲ್ಲಿಗೆ?

ಪ್ರಶ್ನೆ—ನಿನ್ನ ಹೆಸರೇನು?

ಉತ್ತರ—ನನ್ನ ಹೆಸರೇ ಇಲ್ಲ. ಇರುವ ಹೆಸರುಗಳೆಲ್ಲ ನನ್ನ ಹೆಸರುಗಳೇ!

ಪ್ರಶ್ನೆ—ನೀನು ಯಾರು?

ಉತ್ತರ—'ನೀನು ಯಾರು?' ಎಂದು ನನ್ನನ್ನು ಕೇಳುತ್ತಿರುವ ನೀನು ಯಾರೋ ನಾನೂ 'ಅವನೇ'. "ಇದು ನನ್ನ ದೇಹ; ಇದು ನನ್ನ ಮನೆ; ಈಗ ನನಗೆ ಬೇಸರವಾಗಿದೆ; ಈಗ ನನಗೆ ಸಂತೋಷವಾಯಿತು" ಎಂದು ತಿಳಿಯುವ ಅರಿವೇ ನಾನು, ಜ್ಞಾನ ಸ್ವರೂಪವಾದ ಪರಬ್ರಹ್ಮ ವಸ್ತುವೇ ನಾನು.

ಬಾಲಕನ ಈ ಉತ್ತರಗಳನ್ನು ಕೇಳಿ ಶಂಕರಾಚಾರ್ಯರೇ ಚಕಿತರಾದರು ಎಂದ ಮೇಲೆ, ಆ ಬಾಲಕನ ತಂದೆ ತಾಯಿಗಳೂ, ಮತ್ತಿತರರೂ ಆಶ್ಚರ್ಯಪಟ್ಟರೆನ್ನುವುದರಲ್ಲಿ ಸಂದೇಹವೇನು?

ಶಂಕರರು ಪ್ರಭಾಕರರನ್ನು ಕುರಿತು "ಈ ನಿಮ್ಮ ಪುತ್ರನನ್ನು ಸಾಮಾನ್ಯನೆಂದು ತಿಳಿಯಬೇಡಿ. ಈತನು ಮಹಾ ಜ್ಞಾನಿ. ನೀವು ಒಪ್ಪಿಗೆ

ಯನ್ನು ಕೊಡುವುದಾದರೆ ಈತನನ್ನು ನನ್ನ ಶಿಷ್ಯನನ್ನಾಗಿ ಪರಿಗ್ರಹಿಸುತ್ತೇನೆ" ಎಂದರು. ಪ್ರಭಾಕರನು ತನ್ನ ಸಂತೋಷವನ್ನು ವ್ಯಕ್ತಪಡಿಸಿ "ಸ್ವಾಮಿ, ಮೂಕನಾದ ಇವನನ್ನು ವಾಚಾಳಿಯನ್ನಾಗಿ ಮಾಡಿದವರು ನೀವು. 'ಇವನು ನನ್ನ ಮಗ' ಎಂಬ ವ್ಯಾಮೋಹವು ನಿಮ್ಮ ದರ್ಶನ ಮತ್ತು ಸಹವಾಸಗಳಿಂದಲೇ ನಾಶವಾಯಿತು. ನಿಮ್ಮ ದರ್ಶನಕ್ಕಿಂತಲೂ ಮಿಗಿಲಾದ ಪುಣ್ಯವಾವುದು? ನಾನು ಕೃತಕೃತ್ಯನಾದೆ. ಇವನನ್ನು ತಮ್ಮ ಶಿಷ್ಯನಾಗಿ ಸ್ವೀಕರಿಸಬೇಕೆಂದು ನಾನೇ ಬೇಡಿಕೊಳ್ಳುವುದರಲ್ಲಿದ್ದೆ. ತಾವೇ ಅಪ್ಪಣೆಯಿತ್ತಿರಿ" ಎಂದನು.

ಅವಕ್ಕೆ ಶಂಕರರು ಒಪ್ಪಿ ಆ ಬಾಲಕನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡರು. ಕೈಯಲ್ಲಿರುವ ನೆಲ್ಲಿಕಾಯಿಯು ಎಷ್ಟು ಸ್ಪಷ್ಟವಾಗಿ ಕಾಣುತ್ತದೆಯೋ ಅಷ್ಟು ಸ್ಪಷ್ಟವಾಗಿ ವೇದಾಂತ ತತ್ವಗಳನ್ನು ಅರಿತಿದ್ದ ಆ ಬಾಲಕನಿಗೆ ಶಂಕರರು ಹಸ್ತಾಮಲಕ (ಹಸ್ತ= ಕೈಯಲ್ಲಿರುವ ಆಮಲಕ= ನೆಲ್ಲೀಕಾಯಿ) ಎಂಬುದಾಗಿ ನಾಮಕರಣ ಮಾಡಿದರು. ಎಲ್ಲರೂ ಶ್ರೀ ಶಂಕರಾಚಾರ್ಯರನ್ನು ಹೊಗಳಿ ಕೊಂಡಾಡಿದರು.

ಶಂಕರರು ಅನೇಕ ದೇಶಗಳನ್ನು ನೋಡಿ ಅಲ್ಲಿ ತಮ್ಮ ತತ್ವಗಳನ್ನು ಹರಡಿದರು. ಅಂತಹ ಸಂಚಾರವೊಂದರಲ್ಲಿ ನಡೆದುಹೋಗುತ್ತಿದ್ದ ಶಂಕರರನ್ನು ಅನೇಕ ಶಿಷ್ಯರು ಹಿಂಬಾಲಿಸಿದ್ದರು. ಅದೇನೂ ವಿಶೇಷದ ಸಂಗತಿಯಲ್ಲ. ಯಾವಾಗಲೂ ನೂರಾರು ಜನ ಶಿಷ್ಯರು ಆಚಾರ್ಯರನ್ನು ಹಿಂಬಾಲಿಸುತ್ತಿದ್ದರು. ಆದರೆ ಅಂದು ನಡೆದ ಸಂಗತಿ ವಿಶೇಷವಾದದ್ದು.

ಬೇಸಿಗೆಯ ಕಾಲ. ಕೆಳಗೆ ಕಾಲು ಸುಡುವ ಮರಳು; ತಲೆ ಸುಡುವ ಸೂರ್ಯ ಮೇಲೆ. ಹೋಗುತ್ತಿರುವ ದಾರಿಯಾದರೋ ಬೀಡುದಾರಿ. ಸುತ್ತಮುತ್ತಲು ಎಲ್ಲಿಯೂ ಒಂದು ಕೆರೆಯಿಲ್ಲ; ಒಂದು

ಭಾವಿಯಿಲ್ಲ. ಬೆವರು ನೀರು ಬಿಟ್ಟು ಬೇರೆ ನೀರು ಸಿಗುವಂತೆಯೇ ಇಲ್ಲ. ಅಂತಹ ಸಮಯದಲ್ಲಿ ಎಲ್ಲರಿಗೂ ಬಾಯಾರಿಕೆಯಾಗುವುದು ಸಹಜ ತಾನೆ. ಆದರೆ ಆಚಾರ್ಯರೇ ಬಾಯಾರಿಕೆಯನ್ನು ತಡೆದು ಕೊಂಡಿರುವಾಗ ಬೇರೆಯವರು ಹೇಗೆ ತಾನೆ 'ಬಾಯಾರಿಕೆ, ನೀರು ಬೇಕು' ಎನ್ನುವುದು ?

ಸ್ವಲ್ಪದೂರ ಹೋಗಲು ಶಂಕರಾಚಾರ್ಯರು ಅಲ್ಲಿ ಒಂದು ಈಚಲ ಮರವನ್ನು ಕಂಡರು. ಯಾವನೋ ಒಬ್ಬನು ಹೆಂಡವನ್ನು ಕೂಡಿಡುವುದಕ್ಕಾಗಿ ಆ ಮರಕ್ಕೆ ಒಂದು ಮಡಕೆಯನ್ನು ಕಟ್ಟಿದ್ದನು. ಹನಿಹನಿಯಾಗಿ ಬಿದ್ದ ಹೆಂಡ ಅದರ ತುಂಬ ತುಂಬಿತ್ತು. ತಮ್ಮ ದಾಹವನ್ನು ನೀಗಿಸಿಕೊಳ್ಳುವುದಕ್ಕಾಗಿ ಶಂಕರರು, ಆ ಮಡಕೆಯನ್ನು ಕೆಳಕ್ಕೆ ಇಳಿಸಿ ಅದರಲ್ಲಿ ಇದ್ದ ಸುರೆಯನ್ನು ಕುಡಿದುಬಿಟ್ಟರು.

ಅದನ್ನು ಕಂಡ ಶಿಷ್ಯರಲ್ಲೊಬ್ಬಿಬ್ಬರು 'ಇದು ಏನು ಅನ್ಯಾಯ ! ಯತಿಗಳು ಹೆಂಡವನ್ನು ಕುಡಿಯುವುದೆಂದರೇನು ?' ಎಂದು ತಮ್ಮ ತಮ್ಮಲ್ಲೇ ಆಕ್ಷೇಪಿಸತೊಡಗಿದರು. ಶಂಕರರು ಅದನ್ನು ಕೇಳಿಯೂ ಕೇಳದಂತೆ ಮುಂದಡಿಯಿಟ್ಟರು.

ಪ್ರಯಾಣ ಮುಂದುವರೆಯಿತು. ಎಲ್ಲರೂ ಒಂದು ಹಳ್ಳಿಯ ಹತ್ತಿರಕ್ಕೆ ಬಂದರು. ಶಿಷ್ಯರೆಲ್ಲ ಹತ್ತಿರದಲ್ಲಿಯೇ ಇದ್ದ ಭಾವಿಯಲ್ಲಿ ನೀರು ಕುಡಿದು ದಣಿದಿದ್ದ ಮನಸ್ಸನ್ನು ತಣಿಸಿದರು.

ಆ ಹಳ್ಳಿಯಲ್ಲಿ ಒಬ್ಬ ಕಮ್ಮಾರನಿದ್ದನು. ಅವನ ಕಮ್ಮಟವಲ್ಲಿ ಬೆಂಕಿ ಧಗಧಗಿಸುತ್ತಿತ್ತು. ಅದರ ಮೇಲಿದ್ದ ಕಡಾಯಿಯಲ್ಲಿ ಕಬ್ಬಿಣ ಕರಗಿ ನೀರಾಗಿತ್ತು. ಶಂಕರರು ಹಿಂದು-ಮುಂದು ನೋಡದೆ ಆ ಕಡಾಯಿ ಯಲ್ಲಿದ್ದ ಕಬ್ಬಿಣದ ರಸವನ್ನು ಕಬ್ಬಿನ ರಸವನ್ನು ಕುಡಿಯುವ ರೀತಿ ಯಲ್ಲಿ ಕುಡಿದುಬಿಟ್ಟರು. ಅವರು ಹೆಂಡವನ್ನು ಕುಡಿದಾಗ 'ಇದು

ಹೆಂಡ' ಎಂದು ಭಾವಿಸಿರಲಿಲ್ಲ. ಕಬ್ಬಿಣದ ತಪ್ತರಸವನ್ನು ಕುಡಿಯು ವಾಗ 'ಇದು ಕುದಿಯುವ ಅಯೋರಸ' ಎಂದು ಭಾವಿಸಲಿಲ್ಲ. ಆ ಮನೋದಾರ್ಢ್ಯತೆ ಎಲ್ಲರಿಗೂ ಎಲ್ಲಿಂದ ಬಂದೀತು!

ಈ ದೃಶ್ಯವನ್ನು ಕಂಡ ಶಿಷ್ಯರೆಲ್ಲರಿಗೂ ಆಶ್ಚರ್ಯವಾಯಿತು. "ಯತಿಯು ಹೀಗೆ ಮಾಡಬಹುದೇ?" ಎಂದು ನಿಂದಿಸಿದ ಶಿಷ್ಯರು 'ಯತಿಯು ಹೀಗೂ ಮಾಡಬಲ್ಲನೆ!' ಎಂದು ಮೂಗಿನ ಮೇಲೆ ಬೆರಳಿಟ್ಟರು. "ದೊಡ್ಡವರ ಮಾತು ಮತ್ತು ಅವರ ಚರಿತ್ರೆ ದೊಡ್ಡದಾಗಿಯೇ ಇರುತ್ತದೆ. ನಮ್ಮಂತಹವರು ಅದನ್ನು ಅರ್ಥಮಾಡಿಕೊಳ್ಳದೆ ಸುಮ್ಮನೆ ನಿಂದಿಸುತ್ತೇವೆ. ಶಂಕರರನ್ನು ಅವರ ಯೋಗ್ಯತೆ ತಿಳಿಯದೆ ನಿಂದಿಸಿದುದು ತಪ್ಪಾಯಿತು" ಎಂದು ಪಶ್ಚಾತ್ತಾಪಪಟ್ಟರು.

ಸಂಚಾರವನ್ನು ಮುಂದುವರೆಸಿದ ಶಂಕರರು ಶೃಂಗಗಿರಿ (ಈಗಿನ ಶೃಂಗೇರಿ) ಯನ್ನು ಸೇರಿದರು. ವಿಭಾಂಡಕರು ಋಷ್ಯಶೃಂಗನೆಂಬ ಮಗನನ್ನು ಪಡೆದು ಮಲ್ಲಿಕಾರ್ಜುನೇಶ್ವರ ಎಂಬ ಲಿಂಗದಲ್ಲಿ ಐಕ್ಯವಾದುದು ಇಲ್ಲಿಯೇ. ಆದುದರಿಂದ ಈ ಸ್ಥಳಕ್ಕೆ ಶೃಂಗಗಿರಿಯೆಂದು ಹೆಸರಾಯಿತು.

ಈ ಕ್ಷೇತ್ರವು ಪರಮಪವಿತ್ರವಾದ ತುಂಗಾನದಿಯ ದಡದಲ್ಲಿದೆ. ಆ ನದಿಯ ರಾಮಣೀಯತೆಯನ್ನು ಕಂಡು ಶಂಕರರು ಅಲ್ಲಿಯೇ ಕೆಲವು ಕಾಲ ನೆಲಸುವುದಾಗಿ ಮನಸ್ಸು ಮಾಡಿದರು. ಮತ್ತು ತಮ್ಮ ವಾಸಕ್ಕೆ ಅನುಕೂಲವಾದ ಪರ್ಣಶಾಲೆಯನ್ನು ನಿರ್ಮಿಸಲು ತಮ್ಮ ಶಿಷ್ಯರಿಗೆ ಆಜ್ಞಾಪಿಸಿದರು. ಅವರು ಗುರುಗಳ ಆಜ್ಞೆಯಂತೆ ಸ್ವಲ್ಪ ಕಾಲದಲ್ಲಿಯೇ ದಿವ್ಯವಾದ ಒಂದು ಪರ್ಣಶಾಲೆಯನ್ನು ಕಟ್ಟಿದರು.

ಶಂಕರರು ಕೆಲವು ಕಾಲ ಅಲ್ಲಿಯೇ ಇದ್ದು ಬ್ರಹ್ಮಸೂತ್ರ, ಭಾಷ್ಯ, ಉಪನಿಷತ್ತುಗಳು ಮೊದಲಾದುವುಗಳನ್ನು ತಮ್ಮ ಶಿಷ್ಯರಿಗೂ ಬ್ರಾಹ್ಮಣ

ಶ್ರೇಷ್ಠರಿಗೂ ಬೋಧಿಸುತ್ತಾ ವೇದಮತವನ್ನು ಪೊರೆದು ಜಗದ್ರಕ್ಷಣೆಯನ್ನು ಮಾಡಿದರು. ತಮ್ಮ ಸಂಕಲ್ಪದಂತೆ ಗುರುಪೀಠವನ್ನು ಸ್ಥಾಪಿಸುವುದಕ್ಕೆ ಶೃಂಗಗಿರಿಯೇ ದಕ್ಷಿಣದಲ್ಲಿ ಸರಿಯಾದ ಸ್ಥಳವೆಂದು ನಿರ್ಧರಿಸಿದರು. ಆ ವೇಳೆಯಲ್ಲಿಯೆ ಒಂದು ಶುಭ ಮುಹೂರ್ತದಲ್ಲಿ ದಿವ್ಯವಾದ ಒಂದು ದೇವಾಲಯವನ್ನು ಕಟ್ಟಿಸಿ ಅದರಲ್ಲಿ ಶಾರದಾ ವಿಗ್ರಹವನ್ನು ಸ್ಥಾಪಿಸಿದರು.

ಶಾರದಾದೇವಿಯು (ಉಭಯ ಭಾರತೀದೇವಿಯು) ಶಂಕರರಿಂದ ಪರಾಜಯ ಹೊಂದಿ ಬ್ರಹ್ಮಲೋಕಕ್ಕೆ ಹೋಗುವ ಮುಂಚೆ ಅವರಿಗೆ ಮಾತುಕೊಟ್ಟಂತೆ ಆ ವಿಗ್ರಹದಲ್ಲಿ ವಿಶೇಷತಃ ಸನ್ನಿಹಿತಳಾಗಿ ಭಕ್ತಾದಿಗಳ ಇಷ್ಟಾರ್ಥಗಳನ್ನು ಸಲ್ಲಿಸುತ್ತಾ ಈಗಲೂ ಅಲ್ಲಿ ಮೆರೆಯುತ್ತಿದ್ದಾಳೆ.

ಶಂಕರರು ತರುವಾಯ ಅಲ್ಲಿ ಒಂದು ಗುರುಪೀಠವನ್ನು ಸ್ಥಾಪಿಸಿ ಅದರ ಕಾರ್ಯನಿರ್ವಹಣೆಗಾಗಿ ಸುರೇಶ್ವರಾಚಾರ್ಯರನ್ನು ನಿಯಮಿಸಿದರು. ಸುರೇಶ್ವರಾಚಾರ್ಯ, ಪದ್ಮಪಾದ, ಹಸ್ತಾಮಲಕರೆಂಬ ಪಟ್ಟಶಿಷ್ಯರಲ್ಲದೆ ಶಂಕರರಿಗೆ ಇನ್ನೂ ಅನೇಕ ಶಿಷ್ಯರಿದ್ದರು. ಅವರೆಲ್ಲರೂ ಪ್ರತಿದಿನವೂ ಗುರುಸೇವೆಯಲ್ಲಿ ನಿರತರಾಗಿದ್ದುಕೊಂಡು ಅವರ ಉಪದೇಶವನ್ನು ಹೊಂದುತ್ತಿದ್ದರು.

ಅವರಲ್ಲಿ ಆನಂದಗಿರಿಯೆಂಬ ಒಬ್ಬ ಶಿಷ್ಯನಿದ್ದನು. ಅವನಿಗೆ ವಿಶೇಷ ಪಾಂಡಿತ್ಯವಿರಲಿಲ್ಲವಾದರೂ ಅವನು ಗುರುಭಕ್ತಿಯಲ್ಲಿ ಎಲ್ಲರಿಗೂ ಮಿಗಿಲಾಗಿದ್ದನು. ಶಂಕರರು ಆತನ ಭಕ್ತಿಗೆ ಮೆಚ್ಚಿದ್ದರು. ಆದುದರಿಂದ ಅವರಿಗೆ ಈತನ ಮೇಲೆ ಹೆಚ್ಚು ಪ್ರೀತಿಯಿದ್ದಿತು. ಆನಂದಗಿರಿಯು ಪ್ರತಿದಿನವೂ ಪರಮಭಕ್ತಿಯಿಂದ ಗುರುವನ್ನು ಪೂಜಿಸಿ ಅವರು ಹೇಳುತ್ತಿದ್ದುದನ್ನು ಗಮನವಿಟ್ಟು ಕೇಳುತ್ತಿದ್ದನು. ಶಂಕರರು ಗಿರಿ

ಯನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದುದನ್ನು ಕಂಡು ಇತರ ಶಿಷ್ಯರು ಅವನಲ್ಲಿ ಅಸೂಯೆಯಿಂದ ಇದ್ದರು. ಅವನನ್ನು ದಡ್ಡನೆಂದು ತಿರಸ್ಕಾರ ಭಾವ ದಿಂದ ಕಾಣುತ್ತಿದ್ದರು.

ಹೀಗಿರುವಾಗ ಒಂದು ದಿವಸ ಆನಂದಗಿರಿಯು ಗುರುಗಳ ಬಟ್ಟೆ ಗಳನ್ನು ಮಡಿ ಮಾಡುವುದಕ್ಕಾಗಿ ತುಂಗಾನದಿಗೆ ಹೋಗಿದ್ದನು. ಆದುದ ರಿಂದ ಪಾಠದ ವೇಳೆಗೆ ಸರಿಯಾಗಿ ಬರಲಾಗಲಿಲ್ಲ. ಮಿಕ್ಕೆಲ್ಲ ಶಿಷ್ಯರೂ ಬಂದು ಸೇರಿದ್ದರು. ಅವರು ಪಾಠವನ್ನು ಪ್ರಾರಂಭಿಸುವಂತೆ ಶಂಕರರನ್ನು ಪ್ರಾರ್ಥಿಸಿದರು.

ಶಂಕರರು "ಆನಂದಗಿರಿಯು ಇನ್ನೂ ಬಂದಿಲ್ಲ. ಅವನು ಬಂದ ಮೇಲೆ ಪಾಠವನ್ನು ಪ್ರಾರಂಭ ಮಾಡುತ್ತೇನೆ" ಎಂದು ಹೇಳಿ ಸುಮ್ಮನೆ ಕುಳಿತರು. ಕೆಲವು ಶಿಷ್ಯರಿಗೆ ಇದು ಸರಿಹೋಗಲಿಲ್ಲ. ತಮ್ಮ ತಮ್ಮೊಳಗೆ "ಗಿರಿಗೆ ಪಾಠ ಹೇಳುವುದೂ ಒಂದೇ, ಗೋಡೆಗೆ ಪಾಠ ಹೇಳುವುದೂ ಒಂದೇ. ಏನೂ ತಿಳಿಯದ ಆ ಗಗ್ಗ (ದಡ್ಡನು) ಬರದಿದ್ದ ಮಾತ್ರಕ್ಕೆ ಎಲ್ಲರೂ ಪಾಠವಿಲ್ಲದೆ ಸುಮ್ಮನೆ ಕೂಡಬೇಕೆ? ಈ ಪಕ್ಷಪಾತವು ಸರಿ ಯಲ್ಲ" ಎಂದು ಅಸೂಯಾಪರರಾಗಿ ಮಾತನಾಡಿಕೊಳ್ಳಲು ಮೊದಲು ಮಾಡಿದರು. ಶಂಕರರು ಒಳಗೊಳಗೆ ನಗುತ್ತಾ ಅವರ ಅಹಂಕಾರ ವನ್ನು ಮುರಿಯುವುದಾಗಿ ಯೋಚಿಸಿದರು.

ಕೂಡಲೇ ಶಂಕರರು 'ಆನಂದಗಿರಿಯು ಸರ್ವಜ್ಞನಾಗಲಿ' ಎಂದು ಹರಸಿ ತಮ್ಮ ಮೆಚ್ಚಿನ ಶಿಷ್ಯನಾದ ಆನಂದಗಿರಿಗೆ ಚತುರ್ದಶ ವಿದ್ಯೆಗಳೂ ಲಭಿಸುವಂತೆ ವರವನ್ನು ಕೊಟ್ಟರು. ಆ ಗುರುಕೃಪೆಯ ಮಹಿಮೆಯನ್ನು ಏನೆಂದು ಹೇಳೋಣ! ಅತ್ತ ಗುರುವಿನ ಬಟ್ಟೆಗಳನ್ನು ಒಗೆಯುತ್ತಿದ್ದ ಆನಂದಗಿರಿಗೆ ಗುರುವಿನ ಅನುಗ್ರಹದಿಂದ ಸಕಲ ಪಾಂಡಿತ್ಯವೂ ಲಭಿಸಿತು. ಜನ್ಮಾರಭ್ಯ ಕಲಿತರೂ ದೊರೆಯದ

ಪಾಂಡಿತ್ಯವು ಒಂದು ಘಳಿಗೆಯುಲ್ಲಿ ದೊರೆಯಿತು. ಕೆಲವು ನಿಮಿಷಗಳಲ್ಲಿಯೇ ಆನಂದಗಿರಿಯು

ವಿದಿತಾಖಿಲ ಶಾಸ್ತ್ರ ಸುಧಾ ಜಲಧೇ
ಮಹಿತೋಪ ನಿಷತ್ಕಥಿತಾರ್ಥನಿಧೇ ।
ಹೃದಯೇ ಕಲಯೇ ವಿಮಲಂ ಚರಣಂ
ಭವಶಂಕರ ದೇಶಿಕ ಮೇ ಶರಣಂ ॥ "

ಎಂಬುದಾಗಿ ಹಾಡುತ್ತಾ ಶಂಕರರ ಸಮೀಪಕ್ಕೆ ಬಂದುಬಿಟ್ಟನು.

ಒಂದು ಹ್ರಸ್ವಾಕ್ಷರವನ್ನು ಉಚ್ಛರಿಸಲು ನಾವು ತೆಗೆದುಕೊಳ್ಳುವ ಕಾಲಕ್ಕೆ ಒಂದು 'ಮಾತ್ರೆ' ಎಂದು ಹೆಸರು. ಕೆಲವು ಅಕ್ಷರಗಳನ್ನು ಉಚ್ಚರಿಸಲು ಒಂದು ಮಾತ್ರೆಯ ಕಾಲ ಹಿಡಿಸುವುದು. ಅದನ್ನು 'ಲಘು' ಎಂದು ಕರೆಯುತ್ತಾರೆ. ಮತ್ತೆ ಕೆಲವನ್ನು ಉಚ್ಚರಿಸುವಾಗ ಎರಡು ಮಾತ್ರೆಯ ಕಾಲವು ಬೇಕಾಗುವುದು. ಅಂತಹ ಅಕ್ಷರಗಳನ್ನು 'ಗುರು' ಎನ್ನುತ್ತಾರೆ. ದೀರ್ಘಾಕ್ಷರಗಳೂ (ಆ, ಈ, ರಾ) ಮುಂತಾದುವು ಅನುಸ್ವಾರದಿಂದ ಕೂಡಿದ ಅಕ್ಷರಗಳೂ (ಕಂ, ಶಂ) ಮುಂತಾದುವು ವಿಸರ್ಗದಿಂದ ಕೂಡಿದ ಅಕ್ಷರಗಳೂ (ದಃ, ಮಃ) ಮುಂತಾದುವು ಮತ್ತು ಒತ್ತಕ್ಷರದ (ಸಂಯುಕ್ತಾಕ್ಷರದ) ಹಿಂದಿನ ಅಕ್ಷರವೂ 'ಗುರು' ಗಳು. ಪದ್ಯಗಳಲ್ಲಿ ಪಾದದ ಕೊನೆಯ ಅಕ್ಷರವನ್ನು ಲಘುವಾಗಿದ್ದರೂ ಬೇಕಾದಾಗ ಗುರುವೆಂದು ಭಾವಿಸಬಹುದು. ಪದ್ಯದ ಮೂರು ಮೂರು ಅಕ್ಷರಗಳನ್ನು ಒಂದೊಂದು 'ಗಣ' ಎಂದು ವಿಭಾಗ ಮಾಡುತ್ತಾರೆ ಛಂದಶ್ಶಾಸ್ತ್ರದಲ್ಲಿ 'ಯ', 'ರ', 'ತ', 'ಭ', 'ಜ' 'ಸ', 'ಮ' ಮತ್ತು 'ನ' ಎಂಬ ಎಂಟು ಗಣಗಳಿವೆ. ಮೊದಲಿನಲ್ಲಿ ಎರಡು ಲಘುಗಳೂ, ನಂತರ ಒಂದು ಗುರುವೂ ಬಂದರೆ ಆ ಗಣಕ್ಕೆ 'ಸಗಣ' ಎಂದು ಹೆಸರು. ಪ್ರತಿ ಪಾದದಲ್ಲಿಯೂ ನಾಲ್ಕು ನಾಲ್ಕು 'ಸಗಣ' ಗಳ

ನ್ನುಳ್ಳ ವೃತ್ತಕ್ಕೆ (ಪದ್ಯಕ್ಕೆ) ತೋಟಕ ವೃತ್ತ ಎಂದು ಹೆಸರು. ಈ ಛಂದಸ್ಸಿನಲ್ಲಿ ರಚಿಸಲ್ಪಟ್ಟ ಪದ್ಯಗಳು ಹೇಳುವುದಕ್ಕೆ ಬಹಳ ಇಂಪಾಗಿರುತ್ತವೆ.

ಇಂತಹ "ತೋಟಕ" ವೃತ್ತದಲ್ಲಿ ಸಮಸ್ತ ವೇದಗಳ ಸಾರವನ್ನೇ ಬೋಧಿಸುವಂತಹ ಪದ್ಯಗಳನ್ನು ರಚಿಸಿ ಆನಂದಗಿರಿಯು ಗುರುವಿನ ಸನ್ನಿಧಿಯಲ್ಲಿ ವಿಜ್ಞಾಪಿಸಿಕೊಂಡನು. ಶಂಕರರು ಆತನ ಪಾಂಡಿತ್ಯವನ್ನು ವಿಶೇಷವಾಗಿ ಮೆಚ್ಚಿ "ಎಲೈ ಪ್ರಿಯಶಿಷ್ಯನೇ, ತೋಟಕವೃತ್ತದಿಂದ ತತ್ವಾರ್ಥಸಾರವನ್ನು ವಿವರಿಸಿದ ನಿನಗೆ "ತೋಟಕಾಚಾರ್ಯ" ನೆಂಬ ಹೆಸರು ಪ್ರಸಿದ್ಧವಾಗಲಿ" ಎಂದು ಆತನನ್ನು ಎಲ್ಲ ಶಿಷ್ಯರ ಮಧ್ಯದಲ್ಲಿ ಅನುಗ್ರಹಿಸಿದರು. ಅಸೂಯೆಪಟ್ಟವರು ಆಶ್ಚರ್ಯಪಟ್ಟರು.

ಒಂದು ದಿನ ಪರ್ಣಶಾಲೆಯಲ್ಲಿ ಮಣ್ಣಿನ ಮಡಕೆಯೊಂದು ಒಡೆದು, ಹೋಯಿತು. ಶಂಕರರು "ಮಡಕೆ ಏನಾಯಿತು?" ಎಂದು ಕೇಳಲು ಆನಂದಗಿರಿಯು "ಘಟಾಕಾಶವು ಪಟಾಕಾಶದಲ್ಲಿ ಲೀನವಾಯಿತು" ಎಂದನು. ಅದು ಕೆಲವರಿಗೆ ಅರ್ಥವಾಗಲಿಲ್ಲ. ಆಗ ಶಂಕರರು ಹೀಗೆ ತಿಳಿಸಿದರು :

"ಮಡಕೆಯು ಇರುವವರೆಗೂ ಅದರೊಳಗಿರುವ (ಆಕಾಶವನ್ನು) ಗಾಳಿಯನ್ನು ಹೊರಗಿನ ಗಾಳಿಯಿಂದ ಬೇರ್ಪಡಿಸಬಹುದಾಗಿತ್ತು. ಅದು ಒಡೆದುಹೋದ ನಂತರ ಒಳಗಿನ ಗಾಳಿ ಹೊರಗಿನ ಗಾಳಿಯೊಡನೆ ಸೇರಿ ಹೋಯಿತು. ಈಗ ಘಟದೊಳಗಿದ್ದ ಗಾಳಿ ಯಾವುದೆಂದು ಗುರುತು ಹಿಡಿಯುವುದಕ್ಕೆ ಬರುವುದಿಲ್ಲ. "ಘಟಾಕಾಶವು ಪಟಾಕಾಶದಲ್ಲಿ ಸೇರಿತು" ಎಂದರೆ ಎರಡನ್ನೂ ಬೇರ್ಪಡಿಸಿ ಗಡಿಯನ್ನು ನಿರ್ಮಾಣ ಮಾಡಿದ್ದ ಗಡಿಗೆಯು ಒಡೆದು ಹೋಯಿತೆಂದು ಅರ್ಥ"

"ಇದೇ ಜೀವಾತ್ಮ-ಪರಮಾತ್ಮ ತತ್ವವು. ಘಟದ ಹೊರಗಿನ ಮತ್ತು ಒಳಗಿನ ಗಾಳಿಗೆ ಹೇಗೆ ಯಾವ ವ್ಯತ್ಯಾಸವೂ ಇಲ್ಲವೋ ಹಾಗೆಯೇ ದೇಹದೊಳಗಿರುವ ಜೀವನಿಗೂ ಮತ್ತು ದೇಹಾತೀತನೂ ಸರ್ವವ್ಯಾಪಕನೂ ಆದ ಪರಮಾತ್ಮನಿಗೂ ವ್ಯತ್ಯಾಸವಿಲ್ಲ. ಯಾವ ರೀತಿಯಲ್ಲಿ ಘಟವು ಒಂದನ್ನೇ ಎರಡಾಗಿ ವಿಭಾಗಿಸಿ ಭಿನ್ನಭಿನ್ನವಾಗಿ ಕಾಣುವಂತೆ ಮಾಡುತ್ತದೆಯೋ ಹಾಗೆಯೇ, ದೇಹವು ಜೀವ ಮತ್ತು ಆತ್ಮ-ಇವೆರಡೂ ಬೇರೆ ಬೇರೆಯೆಂಬ ಭಾವನೆಯನ್ನು ಕಲ್ಪಿಸುತ್ತದೆ. ಯಾವ ರೀತಿಯಲ್ಲಿ ಘಟವು ಒಡೆದು ಹೋದನಂತರ ಒಳಗಿನ ಗಾಳಿಯು ಹೊರಗಿನ ಗಾಳಿಯಲ್ಲಿ ಲೀನವಾಗಿ ತನ್ನ ಮೊದಲಿನ ಹೆಸರನ್ನೂ ಕಳೆದುಕೊಳ್ಳುವುದೋ ಹಾಗೆಯೇ ದೇಹವು ನಾಶವಾದನಂತರ ಜೀವವು ಆತ್ಮದಲ್ಲಿ ಲೀನವಾಗಿ 'ಜೀವ' ಎಂಬ ತನ್ನ ಮೊದಲಿನ ಹೆಸರನ್ನೂ ಕಳೆದುಕೊಳ್ಳುತ್ತದೆ.

"ಈ ರೀತಿಯಲ್ಲಿ ಜೀವನು ಆತ್ಮನಲ್ಲಿ ಪೂರ್ಣವಾಗಿ ಲೀನನಾಗುತ್ತಾನೆ. 'ಜೀವಾತ್ಮ ಪರಮಾತ್ಮ ಎಂಬುದಾಗಿ ಬೇರೆ ಬೇರೆ ಇಲ್ಲ.' ದೇಹದೊಳಗಿರುವ ಆತ್ಮನಿಗೆ ಜೀವನೆಂದು ಹೆಸರು ಎಂಬ ತತ್ವವೇ ಅದ್ವೈತ ತತ್ವವು. ಈ ತತ್ವವನ್ನು ನಮ್ಮ (ಆನಂದಗಿರಿಯು) ತೋಟಕಾಚಾರ್ಯರು ಎಷ್ಟು ಚೆನ್ನಾಗಿ ತಿಳಿದಿದ್ದಾರೆ!"

ಶಂಕರರ ಪ್ರಶಂಸೆಯನ್ನು ಕೇಳಿದ ಶಿಷ್ಯರು, ಆನಂದಗಿರಿಯ ವಿಷಯದಲ್ಲಿದ್ದ ಅಸೂಯಾಭಾವವನ್ನು ಬಿಟ್ಟು ಬಿಟ್ಟರು. ಗುರುವಿನ ಅನುಗ್ರಹವಿಲ್ಲದೆ ವಿದ್ಯೆಯು ಲಭಿಸುವುದಿಲ್ಲವೆಂದು ಮನಗಂಡು ತಮ್ಮ ಮನಸ್ಸಿನ ಗರ್ವವನ್ನು ತೊರೆದು ಗುರುಕಟಾಕ್ಷದಿಂದ ನಿರ್ಮಲ ಚಿತ್ತರಾದರು. ತೋಟಕಾಚಾರ್ಯರು ಶಂಕರರ ಮುಖ್ಯ ಶಿಷ್ಯರಲ್ಲಿ ನಾಲ್ಕನೆಯವರಾದರು.

ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳೆಂಬ ನಾಲ್ಕು ವೇದಗಳೂ ಜನ್ಮವೆತ್ತಿ ಗುರುವನ್ನು ಸೇವಿಸುತ್ತಿವೆಯೋ, ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳೂ ಒಟ್ಟುಗೂಡಿ ಗುರ್ವರ್ಚನೆಯಲ್ಲಿ ತೊಡಗಿವೆಯೋ, ಬ್ರಹ್ಮನ ನಾಲ್ಕು ಮುಖಗಳೂ ನಾಲ್ಕು ರೂಪುಗಳನ್ನು ಹೊಂದಿ ಗುರುವನ್ನು ಸ್ತುತಿಸುತ್ತಿವೆಯೋ ಎಂಬಂತೆ ಸುರೇಶ್ವರ, ಪದ್ಮಪಾದ, ಹಸ್ತಾಮಲಕ ಮತ್ತು ತೋಟಕರೆಂಬ ನಾಲ್ಕು ಜನ ಶಿಷ್ಯರು ಶಂಕರರನ್ನು ಶೃಂಗಗಿರಿಯಲ್ಲಿ ಭಯಭಕ್ತಿಗಳಿಂದ ಪೂಜಿಸುತ್ತಿದ್ದರು.

ಹೀಗಿರುವಾಗ ಒಮ್ಮೆ ಶಂಕರರು ತಮ್ಮ ಶಿಷ್ಯರಾದ ಸುರೇಶ್ವರಾಚಾರ್ಯರಿಗೆ 'ನಾನು ಬರೆದಿರುವ ಬ್ರಹ್ಮಸೂತ್ರ ಭಾಷ್ಯಕ್ಕೆ ನೀನು ಸಾಮಾನ್ಯ ಜನರಿಗೆ ತಿಳಿಯುವಂತೆ ವೃತ್ತಿವಾರ್ತಿಕಗಳನ್ನು ಬರೆ' ಎಂದು ಆಜ್ಞಾಪಿಸಿದರು. ಇತರ ಶಿಷ್ಯರು "ಸುರೇಶ್ವರರು ಕರ್ಮಕಾಂಡದಲ್ಲಿ ಆಸಕ್ತರಾಗಿದ್ದವರು, ಅವರು ನಿಮ್ಮ ಭಾಷ್ಯಕ್ಕೆ ವಾರ್ತಿಕವನ್ನು ಬರೆದರೆ ಅದರಲ್ಲಿ ಕರ್ಮಕಾಂಡಕ್ಕೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಾರೆ" ಎಂದು ಆಕ್ಷೇಪಿಸಿದರು. ಸುರೇಶ್ವರಾಚಾರ್ಯರು ಈ ಅನುಮಾನವನ್ನು ಕೊನೆಗಾಣಿಸುವುದಕ್ಕೋಸ್ಕರ 'ನೈಷ್ಕರ್ಮ್ಯಸಿದ್ಧಿ' ಎಂಬ ಸ್ವಂತ ಗ್ರಂಥವನ್ನೂ 'ಬೃಹದಾರಣ್ಯಕೋಪನಿಷದ್ಭಾಷ್ಯ ವಾರ್ತಿಕ'ವನ್ನೂ ಬರೆದರು. ಇವುಗಳಿಂದ ಸಹಪಾಠಿಗಳಿಗೆ ಇವರು ಅದ್ವೈತತತ್ತ್ವಾವಲಂಬಿಗಳೇ ಎಂಬುದು ಖಚಿತವಾಯಿತು. ಅನಂತರ ಸುರೇಶ್ವರರು ಗುರುವಿನ ಅನುಮತಿಯಂತೆ ವಾರ್ತಿಕವನ್ನು ಬರೆದರು. ಶಂಕರರು ಬೇರೆ ಶಿಷ್ಯರಿಗೂ ಗ್ರಂಥ ರಚನೆಗಳನ್ನು ಮಾಡುವುದಾಗಿ ಆಜ್ಞಾಪಿಸಿದರು.

ಒಂದು ದಿವಸ ಪದ್ಮಪಾದರು ಶಂಕರರನ್ನು ಭಕ್ತಿಪೂರ್ವಕವಾಗಿ ನಮಿಸಿ "ಸ್ವಾಮಿನ್! ತೀರ್ಥಯಾತ್ರೆಯ ವಿಷಯವಾಗಿ ನೀವು ಬಹಳ

ಹೇಳಿದ್ದೀರಿ. ನನಗೆ ಭಾರತದೇಶದಲ್ಲಿರುವ ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ ಅನೇಕ ಪುಣ್ಯಕ್ಷೇತ್ರಗಳ ದರ್ಶನಮಾಡಿಕೊಂಡು ಬರ ಬೇಕೆಂಬ ಬಯಕೆ ಹೆಚ್ಚಾಗಿದೆ. ದಯವಿಟ್ಟು ನನ್ನ ತೀರ್ಥಯಾತ್ರೆಗೆ ಅನುಮತಿಯನ್ನು ಕೊಡಬೇಕು" ಎಂದು ಕೇಳಿಕೊಂಡರು. ಶಂಕರರು "ಶಿಷ್ಯನಿಗೆ ಗುರುಸೇವೆಗಿಂತಲೂ ಹೆಚ್ಚಾದ ಬೇರೊಂದು ಕರ್ಮವೇ ಇಲ್ಲ. ಗುರುಸೇವೆಯನ್ನುಮಾಡುವುದರಿಂದ ಪುಣ್ಯಕ್ಷೇತ್ರಗಳ ಸಂದರ್ಶನದ ಹತ್ತರಷ್ಟು ಪುಣ್ಯವು ದೊರೆಯುವುದು" ಎಂದು ಹೇಳಿದರೂ, ಪದ್ಮ ಪಾದರು "ನಾನು ಎಲ್ಲಿದ್ದರೂ, ಸದಾ ನನ್ನ ಮನಸ್ಸು ತಮ್ಮ ಪಾದ ಗಳನ್ನೇ ನೆನೆಯುತ್ತಿರುತ್ತದೆ" ಎಂದು ಮತ್ತೆಮತ್ತೆ ಬೇಡಿ ಗುರುವಿನ ಅನುಮತಿಯನ್ನು ಪಡೆದರು.

## ಪ್ರಕರಣ ೧೫

## ಮಾತೃ ಸಂದರ್ಶನ

ಪದ್ಮಪಾದರು ತೀರ್ಥಯಾತ್ರೆಗೆ ಹೊರಟು ಹೋದಮೇಲೆ ಶಂಕರರು ಶೃಂಗಗಿರಿಯಲ್ಲಿ ಕೆಲವು ದಿವಸಗಳಿದ್ದರು. ಹೀಗಿರುವಾಗ ಒಂದು ದಿವಸ ಕಾಲಟಿಯಲ್ಲಿ ಹಾಸಿಗೆ ಹಿಡಿದು ಮಲಗಿದ್ದ ಆರ್ಯಾಂಬೆಯು ಮಗನಾದ ಶಂಕರನನ್ನು ಸ್ಮರಿಸಿಕೊಂಡಳು. ಅದು ಶಂಕರರಿಗೆ ಕೂಡಲೇ ತಿಳಿಯಿತು. ತನ್ನ ತಾಯಿಯು ಮೃತ್ಯುವನ್ನು ಎದುರು ನೋಡುತ್ತಿರುವ ಕಾಲವೆಂದು ತಿಳಿದು, ಶಂಕರರು ತಮ್ಮ ಶಿಷ್ಯರಿಗೆ ಅಲ್ಲಿಯೇ ಇರುವಂತೆ ಅಪ್ಪಣೆಮಾಡಿ ಹೊರಟರು. ನಿಮಿಷ ಮಾತ್ರದಲ್ಲಿ ಕಾಲಟಿಯನ್ನು ಆಕಾಶ ಮಾರ್ಗವಾಗಿ ಬಂದು ಸೇರಿದರು.

ಮಗನನ್ನು ಕಂಡ ಆರ್ಯಾಂಬೆಗೆ ಬಹಳ ಸಂತೋಷವಾಯಿತು. ಸರ್ವವಂದ್ಯರಾದ ಶಂಕರರು ತಾಯಿಗೆ ನಮಸ್ಕಾರ ಮಾಡಿದರು.

ಯತಿಗಳು ಎಲ್ಲರಿಂದಲೂ, ತಂದೆಯಿಂದಲೂ-ನಮಸ್ಕಾರ ಮಾಡಿಸಿ ಕೊಳ್ಳುವರು. ಆದರೆ ಅವರು ತಾಯಿಗೆ ಮಾತ್ರ ನಮಸ್ಕಾರ ಮಾಡುವರು. ತಾಯಿಯ ಗೌರವವೆಷ್ಟು! ಆರ್ಯಾಂಬೆಯ ಕಣ್ಣುಗಳಲ್ಲಿ ಆನಂದ ಬಾಷ್ಪವು ಸುರಿಯತೊಡಗಿತು.

ಆರ್ಯಾಂಬೆಯು ಶಂಕರರನ್ನು ಕುರಿತು "ಶಂಕರ, ಇನ್ನು ನಾನು ಹೆಚ್ಚುಕಾಲ ಈ ಭೂಮಿಯ ಮೇಲೆ ಇರುವಂತೆ ತೋರುವುದಿಲ್ಲ. ಮುಕ್ತಿಯನ್ನು ಹೊಂದುವ ಮಾರ್ಗವನ್ನು ನನಗೆ ತಿಳಿಸು" ಎಂದು ಕೇಳಿದಳು.

ಶಂಕರರು ಶಾಂತರೀತಿಯಿಂದ ಹೇಳಿದರು:-"ಅಮ್ಮ! ಸಾಯುವ ಕಾಲದಲ್ಲಿ 'ನಾನು ಸತ್ತರೆ ನನ್ನ ಹೆಂಡತಿಯ ಗತಿ ಏನು? ಮಕ್ಕಳನ್ನು ಕಾಪಾಡುವವರು ಯಾರು? ನಾನು ಸಂಪಾದಿಸಿದ ಹಣ ಪರರ ಪಾಲಾಗುವುದಲ್ಲ!' ಎಂಬ ಪ್ರಾಪಂಚಿಕ ಚಿಂತೆಗಳಿಂದ ಪೀಡಿತನಾದವನಿಗೆ ಪುನರ್ಜನ್ಮವು ತಪ್ಪುವುದಿಲ್ಲ. ಯಾವನು ಅಂಥಾ ಕಾಲದಲ್ಲಿ ಭಗವನ್ನಾಮಸ್ಮರಣೆ ಮಾಡುತ್ತಾನೆಯೋ ಅಥವಾ ಯಾವನು ಆತ್ಮ ಚಿಂತಾ ತತ್ಪರನಾಗುತ್ತಾನೆಯೋ ಅವನಿಗೆ ಮೋಕ್ಷವು ಸಿಗುತ್ತದೆ. ಮೃತ್ಯು ಸಮಯದಲ್ಲಿ ಎಲ್ಲರಿಗೂ ಮೋಕ್ಷದಲ್ಲಿ ಅಭಿಲಾಷೆಯುಂಟಾಗುವುದಿಲ್ಲ. ಅದು ಮೋಕ್ಷಾರ್ಹರಿಗೆ ಮಾತ್ರ ಉಂಟಾಗುವ ಅಭಿಲಾಷೆ"

"ಮರಣಕಾಲದಲ್ಲಿ 'ನಾನು ಜೀವನು, ಪಾಪಿಯು, ನನಗೆ ನರಕಾದಿಗಳ ತಾಪವುಂಟು' ಎಂದು ಹೆದರುವವನು ಅವುಗಳನ್ನು ಅನುಭವಿಸಿಯೇ ತೀರುತ್ತಾನೆ. ನಿಜವಾಗಿ ನರಕವೂ ಇಲ್ಲ; ಬಾಧೆಯೂ ಇಲ್ಲ. ಜೀವನು ತಾನು ನರಕಕ್ಕೆ ಹೋಗುವುದಾಗಿ ಮನಸ್ಸಿನಲ್ಲಿ ಭಾವಿಸುವುದರಿಂದ ನರಕಕ್ಕೆ ಹೋದ ಹಾಗೂ, ಅಲ್ಲಿ ಅನೇಕ ಕಷ್ಟಗಳನ್ನು ಅನುಭವಿಸಿದಂತೆಯೂ ಭಾಸವಾಗುತ್ತದೆ. ಎಲ್ಲವೂ ಭ್ರಮೆಯಿಂದಲೇ! ಆತ್ಮನನ್ನು ಬಿಟ್ಟು ಮತ್ತೆಲ್ಲವೂ ಸುಳ್ಳು: ಭ್ರಮೆ. ಅವು ನಿಜವಾಗಿ ಇಲ್ಲವೇ ಇಲ್ಲ."

"ಮರಣಕಾಲದಲ್ಲಿ ಯಾವನು 'ನಾನು ಸಚ್ಚಿದಾನಂದ ಸ್ವರೂಪನಾದ, ಚೈತನ್ಯಸ್ವರೂಪನಾದ ಆತ್ಮನು. ಸ್ವರ್ಗವೆಂಬುದೂ ಇಲ್ಲ; ನರಕವೆಂಬುದೂ ಇಲ್ಲ. ಅವೆಲ್ಲವೂ ಮನಸ್ಸಿನ ಕಲ್ಪನೆಗಳು; ತೋರಿಕೆಯವು. "ಜಗನ್ಮಿಥ್ಯಾ ಬ್ರಹ್ಮಸತ್ಯ" ಬ್ರಹ್ಮರೂಪನಾದ 'ನಾನು' ಒಬ್ಬನೇ ಸತ್ಯನು; ಶಾಶ್ವತನು. ಜಗತ್ತೇ ಮೊದಲಾದ ಮಿಕ್ಕೆಲ್ಲವೂ ಸುಳ್ಳು; ತೋರಿಕೆಯವು, ಎಂದು ತಿಳಿಯುತ್ತಾನೆಯೋ ಅವನು ಸಾವನ್ನು 'ಸಾವು' ಎಂದು ತಿಳಿಯದೆ 'ಕೇವಲ ದೇಹ ನಾಶವಾಯಿತು' ಎಂದುಕೊಂಡು ಮುಕ್ತಿಯನ್ನು ಪಡೆಯುತ್ತಾನೆ."

ಶಂಕರರು ಮುಂದುವರಿಸುತ್ತಾ ಹೇಳಿದರು—"ಅಮ್ಮಾ! ಈಗ "ತತ್ವಮಸಿ" ಮಹಾವಾಕ್ಯದ ಅರ್ಥವನ್ನು ವಿವರಿಸುತ್ತೇನೆ ಕೇಳು. ತತ್-ಎಂದರೆ ಅದು, ತ್ವಮ್-ಎಂದರೆ ನೀನು, ಅಸಿ-ಎಂದರೆ ಆಗಿರುವೆ ಎಂದರ್ಥ. ತತ್ವಮಸಿ ಎಂದರೆ "ಅದು (ಆತ್ಮವಸ್ತುವೇ) ನೀನಾಗಿರುವೆ. 'ಅದೇ ನೀನು' ಎಂದಮೇಲೆ ನೀನು (ಜೀವನು) ಬೇರೆ ಆತ್ಮ ಬೇರೆ ಹೇಗಾಗುವುದು? ಅವನ್ನು ಬೇರೆ ಬೇರೆ-ಅವು ಎರಡು-ಎಂದು ತಿಳಿದಿರುವುದೇ ಮೋಹ. ಈ ಮೋಹವು ನಾಶವಾದರೆ ಬ್ರಹ್ಮಜ್ಞಾನವು ತಾನಾಗಿಯೇ ಉಂಟಾಗುವುದು" ಹೀಗೆ ಶಂಕರರು ತಮ್ಮ ತಾಯಿಗೆ ಆತ್ಮ ತತ್ವವನ್ನು ಉಪದೇಶಿಸಿದರು.

ಆರ್ಯಾಂಬೆಯು ಶಂಕರರ ಮಾತುಗಳನ್ನು ಕೇಳುತ್ತಾ ಕೇಳುತ್ತಾ ಮನಸ್ಸಿನಲ್ಲಿ ಆತ್ಮ ತತ್ವವನ್ನೇ ಚಿಂತಿಸತೊಡಗಿದಳು. ಕೆಲವು ನಿಮಿಷಗಳನಂತರ ಶಂಕರರನ್ನು ಕುರಿತು "ಶಂಕರ! ಇನ್ನು ನಾನು ದೇಹವನ್ನು ಬಿಟ್ಟು ಹೊರಡುತ್ತೇನೆ. ನನ್ನ ಅಂತ್ಯಕರ್ಮವನ್ನು ನೀನೇ ಮಾಡಬೇಕು" ಎಂದು ಹೇಳಿದಳು. ಆಗ ಶಂಕರರು "ಅಮ್ಮಾ! ನಿನ್ನ ಮಾತಿನಂತೆಯೇ ಆಗಲಿ. ಸಂನ್ಯಾಸಿಗಳಿಗೆ ಇದು ವಿರುದ್ಧವಾದಾಗ್ಯೂ ನಿನಗಾಗಿ ಆ




ಶ್ರೀ ಶಂಕರರು ತಾಯಿಗೆ ಅಂತ್ಯಕಾಲದಲ್ಲಿ ದರ್ಶನ ಕೊಟ್ಟದ್ದು.

ಕಾರ್ಯವನ್ನು ನಾನು ಮಾಡುತ್ತೇನೆ. ನೀನು ಕೈಲಾಸವನ್ನು ಕುರಿತು ಹೊರಡಬಹುದು" ಎಂದು ಹೇಳಿ ಪರಮೇಶ್ವರನನ್ನು ಕುರಿತು ಪ್ರಾರ್ಥಿಸಿದರು.

ಕೈಲಾಸಪತಿಯಾದ ಶಂಕರನು ಯತಿವರ್ಯ ಶಂಕರರ ಪ್ರಾರ್ಥನೆಯನ್ನು ಮನ್ನಿಸಿ ಆರ್ಯಾಂಬೆಯ ಆತ್ಮವನ್ನು ತನ್ನಲ್ಲಿಗೆ ತರಿಸಿಕೊಳ್ಳುವುದಕ್ಕೆಂದು ತನ್ನ ದೂತರನ್ನು ಕಳುಹಿಸಿಕೊಟ್ಟನು. ಆರ್ಯಾಂಬೆಯು ಶಿವದೂತರನ್ನು ನೋಡಿ ಮಗನನ್ನು ಕುರಿತು "ಶಂಕರ! ಅಂದು ನದಿಯಲ್ಲಿ ನಿನ್ನನ್ನು ಮೊಸಳೆಯು ಹಿಡಿದೆಳೆಯತೊಡಗಿದಾಗ "ಶಂಕರನು ಜೀವದೊಡನೆ ಉಳಿದುಕೊಂಡರೆ ನನ್ನ ಪ್ರಾಣವನ್ನು ನಿನಗೆ ಒಪ್ಪಿಸುವೆನು" ಎಂದು ನಾನು ಶ್ರೀ ಕೃಷ್ಣನಲ್ಲಿ ಹರಕೆಯನ್ನು ಹೊತ್ತಿದ್ದೆನು. ಅದನ್ನು ಸುಳ್ಳುಮಾಡದಿರುವುದಕ್ಕಾಗಿ ಈಗ ವೈಕುಂಠವನ್ನು ಸೇರಬೇಕೆಂದಿದ್ದೇನೆ" ಎಂದಳು.

ಶಂಕರರು ಹಾಗೆಯೇ ಆಗಲಿ ಎಂದರು. ಕೂಡಲೇ ಶಿವದೂತರು ಸ್ವಸ್ಥಾನಕ್ಕೆ ಹಿಂತಿರುಗಿದರು. ಶಂಕರರು ಶ್ರೀವಿಷ್ಣುವನ್ನು ಪ್ರಾರ್ಥಿಸಲು ವಿಷ್ಣುದೂತರು ಬಂದು ಆರ್ಯಾಂಬೆಯ ಮುಂದೆ ನಿಂತರು. ಆರ್ಯಾಂಬೆಯು 'ತತ್ವಮಸಿ' ವಾಕ್ಯಾರ್ಥವನ್ನು ಚಿಂತಿಸುತ್ತಿದ್ದಳು. ಆಕೆಯ ಆತ್ಮವು ನರದೇಹವನ್ನು ಬಿಟ್ಟು ವಿಷ್ಣುದೂತರ ಜೊತೆಯಲ್ಲಿ ವೈಕುಂಠವನ್ನು ಸೇರಿತು.

ತಮ್ಮ ತಾಯಿಯು ಸ್ವರ್ಗಸ್ಥಳಾದುದನ್ನು ಕಂಡ ಶಂಕರರಿಗೆ ಸ್ವಲ್ಪವೂ ದುಃಖವಾಗಲಿಲ್ಲ. ಎಲ್ಲವನ್ನೂ ತಿಳಿದ ಜ್ಞಾನಿಯಲ್ಲವೇ ಅವರು! ಅವರು, ತಾಯಿಗೆ ಕೊಟ್ಟ ಮಾತಿನಂತೆ ತಾಯಿಯ ಶವ ಸಂಸ್ಕಾರವನ್ನು ತಾವೇ ಮಾಡುವುದಾಗಿ ನಿಶ್ಚಯಿಸಿಕೊಂಡರು. ಶವ ವಾಹಕ್ಕಾಗಿ (ಶವವನ್ನು ಹೊರುವುದಕ್ಕಾಗಿ) ಕಾಲಟಿ ಅಗ್ರಹಾರದ, ನೆರೆ

ಹೊರೆಯ ಬ್ರಾಹ್ಮಣರನ್ನು ಕರೆದರು. ಅವರು "ನೀನು ಸಂನ್ಯಾಸಿಯು, ಸಂನ್ಯಾಸಿಯು ಈ ಕಾರ್ಯವನ್ನು ಮಾಡಬಾರದು. ಇದು ಶಾಸ್ತ್ರ ನಿಷಿದ್ಧವು. ಶಾಸ್ತ್ರನಿಷಿದ್ಧವಾದ ಕಾರ್ಯದಲ್ಲಿ ತೊಡಗಿರುವ ನಿನ್ನ ಸಹಾಯಕ್ಕೆ ನಾವು ಬರುವುದಿಲ್ಲ" ಎಂದು ತಟಸ್ಥರಾದರು.

ಆಗ ಶಂಕರರು "ಅಯ್ಯಾ ಬ್ರಾಹ್ಮಣರೇ! ತಾಯಿಗಿಂತ ಮಿಗಿಲಾದ ದೈವವಿಲ್ಲ. ತಾಯಿಗೆ ಕೊಟ್ಟ ಮಾತನ್ನು ನಡೆಸಿಕೊಡು ವುದರಲ್ಲಿ ಯಾವ ದೋಷವೂ ಇಲ್ಲ. ಶಾಸ್ತ್ರವಿರುದ್ಧವಾದರೂ, ತಾಯಿಯು ಹೇಳಿದ ಮಾತು ವೇದವಾಕ್ಯಕ್ಕೆ ಸಮಾನ. ವೇದವಾಕ್ಯ ಗಳನ್ನು ಧಿಕ್ಕರಿಸಿದರೆ ಅವಕ್ಕೆ ಪ್ರಾಯಶ್ಚಿತ್ತವುಂಟು ; ಆದರೆ ತಾಯಿಯ ಮಾತನ್ನು ಧಿಕ್ಕರಿಸಿದವನಿಗೆ ಅಧೋಗತಿಯೇ ಹೊರತು ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ನಾನು ನಮ್ಮ ತಾಯಿಗೆ ಅಂತ್ಯಸಂಸ್ಕಾರಗಳನ್ನು ಮಾಡುವುದಕ್ಕಾಗಿ ಮಾತುಕೊಟ್ಟಿದ್ದೇನೆ. ದಯವಿಟ್ಟು ಮುಂದೆ ಬನ್ನಿ. ಇದೂ ಅಲ್ಲದೆ ಜ್ಞಾನಿಯಾದವನಿಗೆ ಕರ್ಮಾಕರ್ಮಗಳಿಲ್ಲ. ಜ್ಞಾನಿಯು ಕರ್ಮ ಫಲ ತ್ಯಾಗ ಮಾಡಿದವನಾದುದರಿಂದ ಅವನಿಗೆ ಇಂತಹ ಕರ್ಮ ಗಳನ್ನು ಮಾಡಲೇಬೇಕೆಂದಾಗಲಿ ಅಥವಾ ಇಂತಹ ಕರ್ಮಗಳನ್ನು ಮಾಡಕೂಡದೆಂದಾಗಲಿ ನಿಯಮವಿಲ್ಲ" ಎಂಬುದಾಗಿ ಶಾಸ್ತ್ರ ಸಮ್ಮತವಾದ ವಾಕ್ಯಗಳನ್ನು ಎಷ್ಟೆಷ್ಟು ಹೇಳಿದರೂ ಆ ಬ್ರಾಹ್ಮಣರು ಕೇಳಲಿಲ್ಲ ; ಯಾರೂ ಶವವನ್ನು ಹೊರುವುದಕ್ಕೆ ಬರಲಿಲ್ಲ.

ಆಗ ಶಂಕರರು "ಎಲೈ ಬ್ರಾಹ್ಮಣರಿರಾ! ಶಾಸ್ತ್ರಾರ್ಥಗಳನ್ನು ಸರಿಯಾಗಿ ತಿಳಿಯದೆ ನಿಮ್ಮ ಮನಸ್ಸಿಗೆ ಬಂದಂತೆ ನಡೆಯುವ ನೀವು ವೇದಬಾಹಿರರಾಗಿರಿ ಮತ್ತು ಯಾವ ರೀತಿಯಲ್ಲಿ ನಮ್ಮ ತಾಯಿಯ ದಹನಕ್ರಿಯೆಯು ಮನೆಯ ಹಿತ್ತಲಿನಲ್ಲಿಯೇ ಆಗುವುದೋ ಅದೇ ರೀತಿಯಲ್ಲಿ ಇನ್ನು ಮುಂದೆ ನಿಮ್ಮ ನಿಮ್ಮ ಮನೆಯ ಹಿಂದೆಯೇ ದಹನ ಕ್ರಿಯೆಗಳು ನಡೆಯಲಿ" ಎಂದು ಶಾಪ ಕೊಟ್ಟರು.

ಅನಂತರ ಶಂಕರರು ತಾವೇ ಚಿತೆಯನ್ನು ಸಿದ್ಧಪಡಿಸಿದರು. ತಾಯಿಯ ಶವವನ್ನು ಅದರ ಮೇಲಿಟ್ಟರು. ಯತಿಗಳು ಕೆಂಡವನ್ನು ಮುಟ್ಟಬಾರದೆಂಬ ನಿಯಮವಿರುವುದರಿಂದ ತಮ್ಮ ಎರಡು ಕೈಗಳನ್ನೂ ಚಿತೆಯ ಮೇಲಿರಿಸಿ ಉಜ್ಜಿದರು. ಕೈಗಳನ್ನು ತಿಕ್ಕುತ್ತಲೇ ಅಗ್ನಿಯು ಉತ್ಪತ್ತಿಯಾಯಿತು. ಚಿತೆಯೂ ಹತ್ತಿಕೊಂಡು ಉರಿಯತೊಡಗಿತು.

ಈ ಆಶ್ಚರ್ಯವನ್ನು ಕಂಡ ಅಲ್ಲಿನ ಬ್ರಾಹ್ಮಣರು "ಆಚಾರ್ಯರೇ! ನಾವು ಮಾಡಿದುದು ತಪ್ಪಾಯಿತು. ಮಹಾತ್ಮರಲ್ಲಿ ತಪ್ಪನ್ನು ಎಣಿಸಬಾರದು ಎಂಬ ಹಿರಿಯರ ನುಡಿಯನ್ನು ಮರೆತೆವು ಅಜ್ಞರಾದ ನಮ್ಮನ್ನು ಕ್ಷಮಿಸಬೇಕು" ಎಂದು ಕ್ಷಮೆ ಬೇಡಿದರು. ಪರಮದಯಾಮಯರಾದ ಶಂಕರರು ಅವರಿಗೆ ವಿಶಾಪವನ್ನು ಕೊಟ್ಟು ತಮ್ಮ ಶಿಷ್ಯರಿದ್ದ ಶೃಂಗಗಿರಿಗೆ (ಶೃಂಗೇರಿಗೆ) ಬಂದರು.

## ಪ್ರಕರಣ ೧೬

## ಶಂಕರರ ಮೇಧಾಶಕ್ತಿ

ಶಂಕರರು ತಾಯಿಯ ಶವಸಂಸ್ಕಾರವನ್ನು ಪೂರ್ಣಮಾಡಿ ಶೃಂಗಗಿರಿಗೆ ಹಿಂತಿರುಗಿದರು. ಅಲ್ಲಿದ್ದ ಸುರೇಶ್ವರ, ಹಸ್ತಾಮಲಕ, ತೋಟಕರೇ ಮೊದಲಾದ ಶಿಷ್ಯರಿಗೆ ಕಾಲಟಿಯಲ್ಲಿ ನಡೆದ ವಿಷಯವನ್ನು ತಿಳಿಸಿದರು. ತೀರ್ಥಯಾತ್ರೆಗೆ ಹೋಗಿದ್ದ ಪದ್ಮಪಾದರ ಆಗಮನವನ್ನೇ ನಿರೀಕ್ಷಿಸುತ್ತಾ ಕೆಲವು ದಿನಗಳನ್ನು ಕಳೆದರು.

ಅತ್ತ ಯಾತ್ರೆಗಾಗಿ ಹೊರಟಿದ್ದ ಪದ್ಮಪಾದರು ಪುಣ್ಯಕ್ಷೇತ್ರಗಳನ್ನು ಸಂದರ್ಶಿಸುತ್ತಾ ಒಮ್ಮೆ ತಮ್ಮ ಹಿಂದಿನ ವಾಸಸ್ಥಾನವಾದ ಅಹೋಬಲ ಕ್ಷೇತ್ರವನ್ನು ಸೇರಿದರು. ಅಲ್ಲಿ ತಮ್ಮ ಸೋದರಮಾವನ ಮನೆಯಲ್ಲಿ ಭಿಕ್ಷೆಗೆ ನಿಂತರು. ಆ ಸೋದರಮಾವನು ಕರ್ಮವಾದಿ; ಕುಮಾರಿಲಭಟ್ಟನ ಶಿಷ್ಯ, ಮತ್ತು ಜ್ಞಾನಕಾಂಡದ ವಿರೋಧಿ. ಪದ್ಮ

ಪಾದರು ತಾವು ಶಂಕರರ ಶಾರೀರಕ ಸೂತ್ರಭಾಷ್ಯಕ್ಕೆ ಬರೆದ ವ್ಯಾಖ್ಯಾನವನ್ನು ಆ ಮಾವನ ಮುಂದೆ ಓದಿದರು. ಕರ್ಮಮಾರ್ಗಕ್ಕೆ ಶೂಲಪ್ರಾಯವಾದ ಆ ಗ್ರಂಥವನ್ನು ಕೇಳಿ ಅವನಿಗೆ ಸಿಡಿಲು ಬಡೆದಂತಾಯಿತು. ಹೇಗಾದರೂ ಮಾಡಿ ಆ ಪಂಚಪಾದಿಕ (ಐದು ಪಾದಗಳುಳ್ಳ) ಗ್ರಂಥವನ್ನು ನಾಶಮಾಡಿಬಿಡಬೇಕೆಂದು ಯೋಚಿಸಿದನು. ಆದರೂ ಅದನ್ನು ತೋರ್ಪಡಿಸದೆ "ಗ್ರಂಥವು ಬಹಳ ಚೆನ್ನಾಗಿದೆ; ಬಹಳ ಚೆನ್ನಾಗಿದೆ" ಎಂದು ಪ್ರಶಂಸಿಸಿದನು. ಕಪಟವನ್ನರಿಯದ ಪದ್ಮಪಾದರು ಆತನ ಮಾತನ್ನು ನಿಜವೆಂದೇ ನಂಬಿದರು.

ತಾವು ಸೇತುಯಾತ್ರೆ ಹೋಗುವುದಾಗಿಯೂ ಮತ್ತು ತಾವು ಹಿಂತಿರುಗಿ ಬರುವವರೆಗೂ ಆ ಗ್ರಂಥವನ್ನು ಜೋಪಾನವಾಗಿ ಕಾಪಾಡಿಕೊಂಡಿರಬೇಕಾಗಿಯೂ ಆ ಸೋದರಮಾವನಿಗೆ ತಿಳಿಸಿ ಪದ್ಮಪಾದರು ರಾಮೇಶ್ವರದ ಕಡೆಗೆ ಪ್ರಯಾಣ ಬೆಳೆಸಿದರು.

ಆ ಮಾವನು 'ಇದೂ ಒಂದು ಅನುಕೂಲವೇ ಆಯಿತು' ಎಂದುಕೊಂಡ. ಒಂದು ರಾತ್ರಿ ತಾನಿದ್ದ ಮನೆಗೆ ಬೆಂಕಿಹಚ್ಚಿದ. ಪದ್ಮಪಾದರು ಕೊಟ್ಟಿದ್ದ ಪುಸ್ತಕದ ಸಮೇತ ಆ ಮನೆಯು ಸುಟ್ಟು ಬೂದಿಯಾಯಿತು. ಮನೆ ಹೋದುದಕ್ಕಾಗಿ ಅವನಿಗೆ ಸ್ವಲ್ಪವೂ ದುಃಖವಾಗಲಿಲ್ಲ. ಕರ್ಮಮಾರ್ಗಕ್ಕೆ ವಿರುದ್ಧವಾದ ವ್ಯಾಖ್ಯಾನವು ಸುಟ್ಟು ಹೋಯಿತಲ್ಲ! ಎಂಬುದಾಗಿ ಇನ್ನೂ ಸಂತೋಷವೇ ಆಯಿತು.

ಪದ್ಮಪಾದರು ಯಾತ್ರೆಯನ್ನು ಮುಗಿಸಿಕೊಂಡು ಹಿಂತಿರುಗಿ ಬಂದರು. ಆ ಕಪಟ ಮಾವನು ಅವರನ್ನು ಕಂಡು, ಮನೆಯ ಜೊತೆಯಲ್ಲಿ ಪುಸ್ತಕವೂ ಸುಟ್ಟುಹೋಯಿತೆಂದು ತಿಳಿಸಿ, ಅದಕ್ಕಾಗಿ ಬಹಳ ವ್ಯಥೆ ಪಟ್ಟವನಂತೆ ನಟಿಸಿದನು. ಪದ್ಮಪಾದರು "[illegible] ಮನೆಗೇ ಬೆಂಕಿ ಬಿದ್ದು ಸುಟ್ಟುಹೋದಮೇಲೆ ಯಾರೇನು ಮಾಡಬಲ್ಲರು?

ಇದರಲ್ಲಿ ನಿನ್ನ ತಪ್ಪೇನು ? ಹೋಗಲಿ ಬಿಡು. ಗುರುಗಳ ಅನುಗ್ರಹದಿಂದ ಅದನ್ನೇ ಮತ್ತೊಮ್ಮೆ ಬರೆಯುತ್ತೇನೆ " ಎಂದರು.

ಸೋದರಮಾವನಿಗೆ ಗಾಯದ ಮೇಲೆ ಬರೆ ಎಳೆದ ಹಾಗಾಯಿತು. ಪುನಃ ಪುಸ್ತಕವನ್ನು ಬರೆಯುವನಲ್ಲ ! ಎಂಬ ಅಸೂಯೆಯುಂಟಾಯಿತು. ಕೊನೆಗೆ ಪದ್ಮಪಾದರ ಬುದ್ಧಿಯನ್ನೇ ಕೆಡಿಸುವುದಾಗಿ ಯೋಚಿಸಿ ವಿಷಪ್ರಯೋಗ ಮಾಡಿದನು. ಆ ವಿಷದ ಪ್ರಭಾವದಿಂದ ಪದ್ಮಪಾದರಿಗೆ ಸ್ಮೃತಿಭ್ರಮಣೆಯುಂಟಾಯಿತು.

ಪದ್ಮಪಾದರು ಅಲ್ಲಿಂದ ಹೊರಟು ಹೇಗೋ ಶೃಂಗಗಿರಿಯನ್ನು ಸೇರಿ ಶಂಕರರ ಬಳಿಗೆ ಬಂದರು. ಶಂಕರಾಚಾರ್ಯರನ್ನು ನಮಸ್ಕರಿಸಿ ತೀರ್ಥಯಾತ್ರಾ ಪ್ರಸಂಗದಲ್ಲಿ ನಡೆದ ಸಮಾಚಾರವನ್ನು ತಿಳಿಸಿದರು. ಪುಸ್ತಕವು ನಷ್ಟವಾದುದಕ್ಕೆ ಶೋಕಿಸಿ " ಪುನಃ ಆ ಗ್ರಂಥವನ್ನು ಬರೆಯುವಂತೆ ಅನುಗ್ರಹಿಸಬೇಕು " ಎಂದು ಶಂಕರರನ್ನು ಪ್ರಾರ್ಥಿಸಿದರು.

ಆಗ ಶಂಕರರು ಪದ್ಮಪಾದನ ತಲೆಯ ಮೇಲೆ ತಮ್ಮ ಅಮೃತ ಹಸ್ತವನ್ನಿಟ್ಟು "ಪದ್ಮಪಾದ ! ಚಿಂತಿಸಬೇಡ. ಆದುದು ಆಗಿಹೋಯಿತು. ಅಂದು ನೀನು ಗ್ರಂಥವನ್ನು ರಚಿಸಿ ನನ್ನ ಮುಂದೆ ಓದಿದುದು ನನಗೆ ನೆನಪಿದೆ. ಅದರ ಪ್ರತಿ ಅಕ್ಷರವೂ ಚೆನ್ನಾಗಿ ಜ್ಞಾಪಕದಲ್ಲಿದೆ. ಈಗ ನಾನು ಅದನ್ನೇ ಹೇಳುತ್ತೇನೆ. ನೀನು ಬರೆದುಕೋ " ಎಂದು ಹೇಳಿ ಅವರು ಬರೆದ ಪಂಚಪಾದಿಕ ವ್ಯಾಖ್ಯಾನವನ್ನು ಹೇಳಲುಪಕ್ರಮಿಸಿದರು. ಶಂಕರರ ಪಾಣಿಸ್ಪರ್ಶದಿಂದ ಮೊದಲಿನಂತೆ ಜ್ಞಾನವನ್ನು ಹೊಂದಿದ ಪದ್ಮಪಾದರು ಅತ್ಯಾನಂದ ಭರಿತರಾಗಿ ಅವೆಲ್ಲವನ್ನು ಬರೆದುಕೊಂಡರು.

ಆಚಾರ್ಯರು ತಮ್ಮ ಶಿಷ್ಯರಿಗೆ ವೇದಾಂತ ತತ್ವವನ್ನು ಬೋಧಿಸುತ್ತಾ ಕಾಲಕಳೆಯುತ್ತಿರಲು ಒಂದು ದಿವಸ ಕೇರಳದೇಶದ ರಾಜನು ಕಾಣಿಕೆಯೊಡನೆ ಶೃಂಗಗಿರಿಗೆ ಬಂದನು. ಶಂಕರರು ಚಿಕ್ಕವ

ರಾಗಿದ್ದಾಗ ಅವರ ಮಹಿಮೆಯನ್ನು ಕೇಳಿ ಕೇರಳರಾಜನು ಪುತ್ರಾಪೇಕ್ಷೆಯಿಂದ ಅವರಲ್ಲಿಗೆ ಬಂದನೆಂದೂ ಮತ್ತು ತನ್ನ ಮೂರು ನಾಟಕಗಳನ್ನು ಶಂಕರರ ಮುಂದೆ ಓದಿ ಮಗನಾಗುವಂತೆ ವರವನ್ನು ಪಡೆದು ಹಿಂದಿರುಗಿದನೆಂದೂ ಹಿಂದೆಯೇ (೫ನೆಯ ಪ್ರಕರಣದಲ್ಲಿಯೇ) ತಿಳಿಸಿದೆಯಷ್ಟೆ! ಆ ಕೇರಳರಾಜನಿಗೆ ಶಂಕರರ ವರಪ್ರಸಾದದಿಂದ ಒಬ್ಬ ಮಗನು ಹುಟ್ಟಿದನು. ಆ ಶುಭ ವಾರ್ತೆಯನ್ನು ತಿಳಿಸುವುದಕ್ಕಾಗಿ ರಾಜನೇ ಸ್ವತಃ ಬಂದನು.

ಆ ಕೇರಳರಾಜನು ಶಂಕರರಿಗೆ ಅಭಿವಂದಿಸಿ "ಆಚಾರ್ಯ! ನಿಮ್ಮ ಅನುಗ್ರಹದಿಂದ ನಮ್ಮ ವಂಶವೇ ಉದ್ಧಾರವಾಯಿತು. ನನಗೆ ಪುತ್ರಸಂತಾನವಾಯಿತೆಂಬ ವಾರ್ತೆಯನ್ನು ತಿಳಿಸಲು ಬಂದಿದ್ದೇನೆ." ಎಂದು ವಿನಯದಿಂದ ತಿಳಿಸಿದನು.

ಶಂಕರರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿ "ನೀವು ಬರೆದಿದ್ದ ಮೂರು ನಾಟಕಗಳೂ ಪ್ರಚಾರಕ್ಕೆ ಬಂದುವೇ?" ಎಂದು ಪ್ರಶ್ನಿಸಿದರು. ಅದಕ್ಕೆ ರಾಜನು ದುಃಖಿಸುತ್ತಾ "ಆಚಾರ್ಯರೇ! ನನ್ನ ದುರದೃಷ್ಟವನ್ನು ಏನೆಂದು ಹೇಳಲಿ? ಅಕಸ್ಮಾತ್ತಾಗಿ ಉಂಟಾದ ಅಗ್ನಿಪ್ರಮಾದದಿಂದ ಅವು ಮೂರೂ ಸುಟ್ಟು ಹೋದುವು" ಎಂದು ತಿಳಿಸಿದನು.

ಶಂಕರರು 'ರಾಜನ್! ದುಃಖಿಸುವುದರಿಂದ ಏನು ಪ್ರಯೋಜನ? ಅಂದು ನೀವು ಆ ಮೂರು ನಾಟಕಗಳನ್ನೂ ಓದಿದಿರಿ. ಅದು ಈಗಲೂ ನನ್ನ ಜ್ಞಾಪಕದಲ್ಲಿದೆ. ಹೇಳುತ್ತೇನೆ ಬರೆದುಕೊಳ್ಳಿ" ಎಂದರು. ಈ ಮಾತುಗಳನ್ನು ಕೇಳಿದ ರಾಜನಿಗೆ, ಹಸಿದವನಿಗೆ ರಸಗವಳ ಸಿಕ್ಕಷ್ಟು, ಸಂತೋಷವಾಯಿತು. ಶಂಕರರು ಚಾಚೂ ತಪ್ಪದೆ ಮೂರು ನಾಟಕಗಳನ್ನು ಹೇಳಿದರು. ಆನಂದಿತನಾದ ಆ ರಾಜನು ಅವುಗಳನ್ನು ಬರೆದುಕೊಂಡನು.

ಅನಂತರದಲ್ಲಿ, ಕೇರಳರಾಜನು ಯತಿವರ್ಯರಿಗೆ ನಮಸ್ಕರಿಸಿ ಹಿಂತಿರುಗುವುದಕ್ಕೆ ಅಪ್ಪಣೆ ಬೇಡಿದನು. ಶಂಕರರು "ಈ ಮೂರು ನಾಟಕಗಳೂ ಪ್ರಖ್ಯಾತವಾಗಲಿ" ಎಂದು ಹರಸಿ ರಾಜನನ್ನು ಬೀಳ್ಕೊಟ್ಟರು.

ಎಂದೋ ಒಮ್ಮೆ ಕೇಳಿದ ಪುಸ್ತಕಗಳನ್ನು ಚಾಚೂ ತಪ್ಪದೆ ಸ್ಮೃತಿಯಲ್ಲಿಟ್ಟುಕೊಂಡಿರಬೇಕಾದರೆ ಅವರ ಮೇಧಾಶಕ್ತಿಯು ಎಂತಹದು ಅದನ್ನು ಎಷ್ಟೆಂದು ವರ್ಣಿಸಲು ಸಾಧ್ಯ?

## ಪ್ರಕರಣ ೧೭

## ಎಲ್ಲೆಲ್ಲಿಯೂ ಜಯಭೇರಿ!

ತಾವೇ ಪಂಡಿತರೆಂದು ಬೀಗುವ ಪಂಡಿತರೆಲ್ಲರನ್ನು ವಾದದಲ್ಲಿ ಗೆಲ್ಲುವ ಉದ್ದೇಶದಿಂದ ಶಂಕರರು ದಿಗ್ವಿಜಯ ಯಾತ್ರೆಯನ್ನು ಕೈಗೊಳ್ಳಲು ನಿಶ್ಚಯಿಸಿದರು. ಸುಧನ್ವ ರಾಜನೂ, ಸುರೇಶ್ವರಾಚಾರ್ಯ ಪದ್ಮಪಾದಚಾರ್ಯ, ಹಸ್ತಾಮಲಕಾಚಾರ್ಯ ಮತ್ತು ತ್ರೋಟಕಾಚಾರ್ಯರೇ ಮೊದಲಾದ ಶಿಷ್ಯರೂ ಶಂಕರರೊಡನೆ, ಶೃಂಗಗಿರಿಯನ್ನು ಬಿಟ್ಟು ಹೊರಟರು. ಅಖಂಡಭಾರತದಲ್ಲಿ ವೇದ ಪ್ರತಿಪಾದಿತವಾದ ಅದ್ವೈತ ತತ್ವವನ್ನು ಹರಡುವುದು ಶಂಕರರ ಧ್ಯೇಯವಾಗಿರುವುದರಿಂದ, ಆಸೇತು ಹಿಮಾದ್ರಿಪರ್ಯಂತ ಇರುವ ಎಲ್ಲ ರಾಜ್ಯಗಳನ್ನೂ ಸಂದರ್ಶಿಸಿ, ಅಲ್ಲಲ್ಲಿರುವ ಕುಮತಗಳನ್ನು ಖಂಡಿಸುವುದಾಗಿ ಅವರು ತೀರ್ಮಾನಿಸಿದರು.

ಆಚಾರ್ಯರು ಮೊದಲನೆಯದಾಗಿ ಸೇತು ಯಾತ್ರೆಯನ್ನು ಕೈಗೊಂಡರು. ಮಾರ್ಗಮಧ್ಯದಲ್ಲಿ "ಮಧ್ಯಾರ್ಜುನೇಶ್ವರ" ಎಂಬ ಕ್ಷೇತ್ರವನ್ನು ತಲುಪಿದರು. ಅಲ್ಲಿ ಸೂರ್ಯೋಪಾಸಕರಾದ ಸೌರರು ವಾಸವಾಗಿದ್ದರು. ಸೂರ್ಯನನ್ನೇ ಆರಾಧ್ಯದೇವನನ್ನಾಗಿ ಉಳ್ಳ ಅವರು ತೇಜೋರೂಪನಾದ ಸೂರ್ಯನೇ ಸರ್ವಶ್ರೇಷ್ಠನೆಂದೂ,

ಅವನನ್ನು ರಕ್ತಗಂಧದಿಂದ ಪೂಜಿಸಬೇಕೆಂದೂ ನಂಬಿದ್ದರು. ಅದಕ್ಕಾಗಿ ತಮ್ಮ ಬಲಗೈಯ ಹೆಬ್ಬೆರಳನ್ನು ಸ್ವಲ್ಪ ಕುಯ್ದು ಆ ರಕ್ತದಲ್ಲಿ ಗಂಧವನ್ನು ತೆಗೆದು ಸೂರ್ಯನನ್ನ ಪೂಜಿಸುತ್ತಿದ್ದರು. ಶಂಕರರು "ನೀವು ಮಾಡುತ್ತಿರುವ ಈ ತರಹವಾದ ಪೂಜೆಯು ತಪ್ಪು. ರಕ್ತಗಂಧವೆಂದರೆ ರಕ್ತದಲ್ಲಿ ತೆಗೆದ ಗಂಧವೆಂಬ ಅರ್ಥವಲ್ಲ; ರಕ್ತವರ್ಣದ ಗಂಧವೆಂದು ಅರ್ಥ. ಕೆಂಪುಗಂಧದಿಂದ ಪೂಜಿಸಿ" ಎಂದು ತಿಳಿಸಿದರು. ಸೂರ್ಯನೇ ಶ್ರೇಷ್ಠತಮನಾದ ದೇವರೆಂದೂ, ಮತ್ತು ಅವನೇ ಮೋಕ್ಷಕೊಡುವವನೆಂದೂ ಅವರು ವಾದಿಸಲು, ಶಂಕರರು ಶ್ರುತಿ, ವೇದಗಳನ್ನು ಉದಾಹರಿಸಿ ಅವರ ಮತವನ್ನು ಖಂಡಿಸಿ ಅದ್ವೈತಜ್ಞಾನವೇ ಮೋಕ್ಷಪ್ರದವೆಂದು ತಿಳಿಸಿದರು.

ಸೌರರು "ನಮಗೆ ನಿಮ್ಮ ವೇದಗಳ ಅಥವಾ ಶ್ರುತಿಗಳ ಆಧಾರಯುತವಾದ ವಾದವು ಬೇಡ. ಮಧ್ಯಾರ್ಜುನೇಶ್ವರನು ಪ್ರತ್ಯಕ್ಷನಾಗಿ 'ಅದ್ವೈತ ತತ್ವವೇ ಸತ್ಯವು ಮತ್ತು ಮೋಕ್ಷಪ್ರದವು' ಎಂದು ಹೇಳಿದರೆ ನಾವು ಒಪ್ಪಿಕೊಳ್ಳುತ್ತೇವೆ" ಎಂದು ಪರೀಕ್ಷೆ ಇಟ್ಟರು.

ಶಂಕರರು ಮಧ್ಯಾರ್ಜುನೇಶ್ವರನನ್ನು ಪ್ರಾರ್ಥಿಸಲು, ತಟಾರನೆ ಕೋಟಿ ಸೂರ್ಯ ಪ್ರಕಾಶನೂ, ಕೋಟಿ ಚಂದ್ರ ಶೀತಲನೂ ಆದ ಈಶ್ವರನು ಪ್ರತ್ಯಕ್ಷನಾಗಿ "ಸತ್ಯಮದ್ವೈತಂ, ಸತ್ಯಮದ್ವೈತಂ, ಸತ್ಯಮದ್ವೈತಂ" (ಅದ್ವೈತವು ಸತ್ಯವು) ಎಂಬುದಾಗಿ ಮೂರು ಬಾರಿ ಹೇಳಿ ಅಂತರ್ಧಾನನಾದನು. ಆಗ ಅದ್ವೈತತತ್ವದಲ್ಲಿ ನಂಬಿಕೆಯುಂಟಾಗಿ ಆ ಸೌರರು ಶಂಕರರ ಅನುಯಾಯಿಗಳಾದರು.

ಆಚಾರ್ಯರು ಪ್ರಯಾಣವನ್ನು ಮುಂದುವರೆಸಿ ರಾಮೇಶ್ವರವನ್ನು ಸೇರಿದರು. ಅಲ್ಲಿ, ಶ್ರೀರಾಮಚಂದ್ರನು ತ್ರೇತಾಯುಗದಲ್ಲಿ ಪ್ರತಿಷ್ಠಾಪಿಸಿ ಪೂಜಿಸಿದ ಈಶ್ವರನನ್ನು ಅರ್ಚಿಸಿ ಸ್ತುತಿಸಿದರು. ಅಲ್ಲಿದ್ದ ವೈಷ್ಣವರು

ಶಂಕರಾಚಾರ್ಯರನ್ನು ಕುರಿತು "ಈಶ್ವರನನ್ನು ಏಕೆ ಪೂಜಿಸುತ್ತೀರಿ? ವಿಷ್ಣುವು ಸರ್ವೋತ್ತಮನು. ಮೋಕ್ಷವನ್ನು ಅಪೇಕ್ಷಿಸುವವನು ತಾನು ಶಂಖಚಕ್ರಗಳ ಮುದ್ರೆಗಳನ್ನು ಧರಿಸಿಕೊಂಡು, ಸರ್ವೋತ್ತಮನಾದ ಪುರುಷೋತ್ತಮನನ್ನು ಭಜಿಸಬೇಕು. ಮೋಕ್ಷವನ್ನು ಕೊಡಬಲ್ಲವನು ಕೇವಲ ವಿಷ್ಣುವೊಬ್ಬನೇ" ಎಂದು ವಾದಿಸಿದರು.

ಶಂಕರರು ಅವರನ್ನು ಕುರಿತು "ಎಲೈ ವೈಷ್ಣವರಿರಾ! ನಿಮ್ಮ ಚರ್ಮಗಳನ್ನು ಸುಟ್ಟುಕೊಂಡರೇನು ಬಂತು? ಕಾಯಿಸಿದ ಶಂಖ, ಚಕ್ರಗಳ ಮುದ್ರೆಗಳಿಂದ ದೇಹಶೋಷಣೆ ಮಾಡಿದರೇನು ಬಂತು? ಪುಣ್ಯ ಸಂಪಾದನೆಗೆ ಕಾರಣೀ ಭೂತವಾದ ದೇಹವನ್ನು ಸುಡುವುದರಿಂದ ಮನಸ್ಸಿಗಾಗಲಿ, ದೇಹಕ್ಕಾಗಲಿ, ಸುಖವೆನಿಸುವುದಿಲ್ಲ. ದೇಹವನ್ನು ಸುಡಬೇಕು ಎಂದರೆ ಈ ರೀತಿ ಕಾಯಿಸಿದ ಮುದ್ರೆಗಳಿಂದ ದೇಹವನ್ನು ಸುಡಬೇಕೆಂದು ಅರ್ಥವಲ್ಲ. ಜ್ಞಾನಾಗ್ನಿಯಿಂದ ದೇಹವನ್ನು (ದೇಹದ ವಿಷಯದಲ್ಲಿ ಮಮತಾದಿಗಳನ್ನು) ಸುಡಬೇಕೆಂದು ಅರ್ಥ" ಎಂದು ಹೇಳಿ ಮುಂದೆ ವಾದಿಸತೊಡಗಿದರು.

"ವಿಷ್ಣುವು ಸರ್ವೋತ್ತಮನೆಂದು ಹೇಗೆ ಹೇಳಬಲ್ಲಿರಿ? ಪುರಾಣಗಳ ಆಧಾರದ ಮೇಲೆ ವಿಷ್ಣುವೇ ಎಲ್ಲ ದೇವರಿಗಿಂತ ಉತ್ತಮನೆಂದು ಹೇಳುವಿರಲ್ಲವೇ? ಶಿವನು ಸರ್ವೋತ್ತಮನೆಂದು ಹೇಳುವುದಕ್ಕೂ ಪುರಾಣಗಳೇ ಆಧಾರವಾಗಿರುವುವು. (೧) ದೇವೀ ಭಾಗವತ (೨) ಭವಿಷ್ಯ ಪುರಾಣ (೩) ಮತ್ಸ್ಯ ಪುರಾಣ (೪) ಮಾರ್ಕಂಡೇಯ ಪುರಾಣ (೫) ಬ್ರಹ್ಮ ಪುರಾಣ (೬) ಬ್ರಹ್ಮಾಂಡ ಪುರಾಣ (೭) ಬ್ರಹ್ಮ ವೈವರ್ತಕ ಪುರಾಣ (೮) ವಾಮನ ಪುರಾಣ (೯) ವಿಷ್ಣು ಪುರಾಣ (೧೦) ವರಾಹ ಪುರಾಣ (೧೧) ವಾಯು ಪುರಾಣ (೧೨) ಅಗ್ನಿ ಪುರಾಣ (೧೩) ನಾರದ ಪುರಾಣ (೧೪) ಪದ್ಮ ಪುರಾಣ (೧೫) ಲಿಂಗ

ಪುರಾಣ (೧೬) ಗರುಡ ಪುರಾಣ (೧೭) ಕೂರ್ಮ ಪುರಾಣ ಮತ್ತು (೧೮) ಸ್ಕಾಂದ ಪುರಾಣವೆಂಬ ಹದಿನೆಂಟು ಪುರಾಣಗಳನ್ನೂ ವ್ಯಾಸರೊಬ್ಬರೇ ಬರೆದಿದ್ದಾರೆ. ಇವುಗಳಲ್ಲಿ ಶೈವ ಪುರಾಣಗಳು ೧೦, ವಿಷ್ಣು ಪುರಾಣಗಳು ೪, ಬ್ರಹ್ಮ ಪುರಾಣಗಳು ೨, ಅಗ್ನಿ ಪುರಾಣ ೧, ಮತ್ತು ಸೂರ್ಯ ಪುರಾಣ ೧, ವ್ಯಾಸರು ಆಯಾ ಪುರಾಣಗಳಲ್ಲಿ ಆಯಾ ದೇವರನ್ನು ಸರ್ವೋತ್ತಮನೆಂದು ತಿಳಿಸಿದ್ದಾರೆ. ತಮ್ಮ ತಮ್ಮ ಸಂಸ್ಕಾರಗಳಿಗನುಸಾರವಾಗಿ ಒಬ್ಬನೇ ದೇವನ ಬೇರೆ ಬೇರೆ ಹೆಸರುಗಳಲ್ಲಿ ಒಬ್ಬೊಬ್ಬರಿಗೆ ಒಂದೊಂದು ಹಿಡಿಸುತ್ತದೆ. ಯಾವ ಜೀವನಿಗೆ ಯಾವ ನಾಮವು ರುಚಿಕರವಾಗಿ ಕಾಣುತ್ತದೆಯೋ, ಯಾವ ನಾಮದಲ್ಲಿ ಆದರವಿರುತ್ತದೆಯೋ ಆ ನಾಮವನ್ನೇ ಉಚ್ಚರಿಸುತ್ತಾ ಚಿತ್ತಶುದ್ಧಿಯನ್ನು ಪಡೆಯುತ್ತಾನೆ. ಚಿತ್ತಶುದ್ಧಿಯಿಂದ ಜ್ಞಾನವು ಲಭ್ಯವಾಗುತ್ತದೆ. ಜ್ಞಾನದಿಂದ ಮುಕ್ತಿಯು ದೊರೆಯುತ್ತದೆ.

' ಹೀಗಿರುವಾಗ ಶಿವನು ಹೆಚ್ಚೆಂದಾಗಲಿ, ವಿಷ್ಣುವು ಹೆಚ್ಚೆಂದಾಗಲಿ ಹೇಗೆ ಹೇಳುವುದು ? ಶಿವ ಪುರಾಣವೊಂದರಲ್ಲಿ ' ಒಂದು ಸಲ ವಿಷ್ಣುವು ಶಿವಸಹಸ್ರನಾಮವನ್ನು ಪಠಿಸುತ್ತಾ ಶಿವಲಿಂಗವನ್ನು ಅರ್ಚಿಸುತ್ತಿದ್ದನು. ಬಳಿಯಲ್ಲಿ ಒಂದೊಂದು ನಾಮಕ್ಕೆ ಒಂದೊಂದು ಕಮಲದ ಹೂವಿನಂತೆ ಒಂದು ಸಾವಿರ ಹೂಗಳನ್ನು ಇಟ್ಟುಕೊಂಡಿದ್ದನು. ಶಿವನು ವಿಷ್ಣುವಿನ ಭಕ್ತಿಯನ್ನು ಪರೀಕ್ಷಿಸುವುದಕ್ಕೋಸ್ಕರ ಒಂದು ಹೂವನ್ನು ಕಣ್ಣಿಗೆ ಕಾಣಿಸದಂತೆ ಮರೆಮಾಡಲು, ವಿಷ್ಣುವು ಕಮಲದ ಹೂವಿಗೆ ಸಮಾನವಾದ ತನ್ನ ಒಂದು ಕಣ್ಣನ್ನೇ ಕಿತ್ತು ಶಿವನನ್ನು ಪೂಜಿಸಿದನು ' ಎಂಬ ಕಥೆಯಿದೆ. ವಿಷ್ಣು ಪುರಾಣವೊಂದರಲ್ಲಿ ಶಿವನು ವಿಷ್ಣುವಿನ ಆರಾಧಕನೆಂದೂ, ವಿಷ್ಣುವು ಭಸ್ಮಾಸುರನನ್ನು ಕೊಂದು ಶರಣಾಗತನಾದ ಶಿವನನ್ನು ಕಾಪಾಡಿದನೆಂದೂ ಉಕ್ತವಾಗಿದೆ. ಹೀಗಿರುವಾಗ ಹರನು

ದೊಡ್ಡವನೋ? ಹರಿಯು ದೊಡ್ಡವನೋ? ಇದರಲ್ಲಿ ಶ್ರೇಷ್ಠರು ಯಾರೆಂದು ಹೇಳುವುದು?" ಅದು ಸಾಧ್ಯವಿಲ್ಲ. ಹರಿಹರರಲ್ಲಿ ಭೇದವಿಲ್ಲ"

"ಹಾಗಾದರೆ ಪುರಾಣಗಳಲ್ಲಿ ಒಂದು ಕಡೆ ವಿಷ್ಣುವು ಶ್ರೇಷ್ಠನೆಂದೂ ಮತ್ತೊಂದು ಕಡೆ ಶಿವನು ಶ್ರೇಷ್ಠನೆಂದೂ ಬರೆದ ವ್ಯಾಸರಿಗೆ ಬುದ್ಧಿ ನೆಟ್ಟಗಿರಲಿಲ್ಲವೆಂದು ಹೇಳಬೇಕೆ? ಅದು ಹಾಗಲ್ಲ. ಆಯಾ ಪುರಾಣಗಳಲ್ಲಿ ಆಯಾ ವ್ಯಕ್ತಿಗೆ ಪ್ರಾಶಸ್ತ್ಯವು ಕೊಡಲ್ಪಟ್ಟಿದೆ. ರಜೋಗುಣ ಪ್ರಧಾನವಾದ ಸೃಷ್ಟಿ, ಸತ್ವಗುಣ ಪ್ರಧಾನವಾದ ಸ್ಥಿತಿ ಮತ್ತು ತಮೋಗುಣ ಪ್ರಧಾನವಾದ ಲಯ ಕಾರ್ಯಗಳಲ್ಲಿ ಅಭಿಮಾನವುಳ್ಳ ಬ್ರಹ್ಮ, ವಿಷ್ಣು, ಮಹೇಶ್ವರರ ಚೈತನ್ಯ ಶಕ್ತಿಯಲ್ಲಿ ಯಾವ ಭೇದವೂ ಇಲ್ಲ. ರೂಪ, ನಾಮಗಳಲ್ಲಿ ಮಾತ್ರ ಭೇದವು ತೋರುತ್ತದೆ."

"ಹರಿರೂಪಧರ ಶ್ಶಂಭುಃ, ಶಂಭು ರೂಪ ಧರೋ ಹರಿಃ ।
ಈಷವಪ್ಯಂತರಂನಾಸ್ತಿ ಭೇದಕೃತ್ಪಾಪಮಶ್ನುತೇ ॥"

[ಹರಿ ರೂಪನೇ ಹರನು, ಹರ ರೂಪನೇ ಹರಿಯು. ಹರಿಹರರಲ್ಲಿ ಸ್ವಲ್ಪವೂ ಭೇದವಿಲ್ಲ. ಆ ರೀತಿಯಲ್ಲಿ ಭೇದವನ್ನು ಕಲ್ಪಿಸುವವನು ಪಾಪವನ್ನು ಹೊಂದುತ್ತಾನೆ]

ಈ ಉಪನ್ಯಾಸವನ್ನು ಕೇಳಿ ಆ ವೈಷ್ಣವರೂ ಶಂಕರರ ಅದ್ವೈತ ತತ್ವವನ್ನು ಅನುಮೋದಿಸಿದರು.

ಅಲ್ಲಿಂದ ಮುಂದೆ ಹೊರಟ ಶಂಕರರು ಪೂರ್ವ ಸಮುದ್ರದ ತೀರದಲ್ಲಿಯೇ ಮುಂದುವರೆದು 'ಕಂಚಿ' ಕ್ಷೇತ್ರವನ್ನು ಸೇರಿದರು. ಅಲ್ಲಿನ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಿ ವಿಮತವಾದಿಗಳನ್ನು ವಾದದಲ್ಲಿ ಜಯಿಸಿದರು.

ಅಲ್ಲಿನ ಕಾಮಾಕ್ಷಿ ದೇವಾಲಯದಲ್ಲಿ ಮೂಕಪ್ರಾಣಿಗಳನ್ನು ಬಲಿ ಕೊಟ್ಟು ಪೂಜಿಸುವ ಅಭ್ಯಾಸವಿದ್ದಿತು. ಜಾತ್ರೆಯು ಸೇರಿದಾಗ ಪ್ರತಿ ದಿವಸವೂ, ತಪ್ಪದಂತೆ, ಪ್ರಾಣಿಗಳನ್ನು ಬಲಿಕೊಡಬೇಕಾಗಿತ್ತು. ಎಂದಾದರೂ ಪ್ರಮಾದವಶದಿಂದ ಬಲಿಯನ್ನು ಕೊಡದಿದ್ದರೆ ಕಾಮಾಕ್ಷಿಯು ಭೀಕರ ಸ್ವರೂಪವನ್ನು ತಾಳಿ ಮಧ್ಯರಾತ್ರಿಯಲ್ಲಿ ಸಂಚಾರ ಹೊರಟು ಸಿಕ್ಕಸಿಕ್ಕ ಪ್ರಾಣಿಗಳನ್ನು ನುಂಗಿಬಿಡುತ್ತಿದ್ದಳು.

ಈ ಸಮಾಚಾರವನ್ನು ತಿಳಿದು ಶಂಕರರು ಆ ವರ್ಷ ಬಲಿಕೊಡು ವುದನ್ನು ಪ್ರಯತ್ನ ಪೂರ್ವಕವಾಗಿ ನಿಲ್ಲಿಸಿದರು. ರಾತ್ರಿ ಕಾಮಾಕ್ಷಿಯು ಪ್ರಾಣಿ ಭಕ್ಷಣೆಗಾಗಿ ಹೊರಡುವಳೆಂದು ತಿಳಿದು ತಾವು ಗರ್ಭ ಗುಡಿಯ ಬಾಗಿಲಲ್ಲಿ ಹೋಗಿ ಕುಳಿತರು. ಮಧ್ಯರಾತ್ರಿಯ ಸಮಯದಲ್ಲಿ ಕಾಮಾಕ್ಷಿಯು ಕ್ರುದ್ಧಳಾಗಿ, ಕಣ್ಣುಗಳಲ್ಲಿ ಕೆಂಡವನ್ನೇ ಕಕ್ಕುತ್ತಾ ಹೊರಟಳು. ಶಂಕರರು ಆ ಭಯಾನಕ ರೂಪಕ್ಕೆ ಸ್ವಲ್ಪವೂ ಹೆದರದೆ ಮುಂದೆ ಬಂದರು. ಕಾಳಿಕಾ ಮಂತ್ರವನ್ನು ಜಪಿಸಿ, ಕಾಮಾಕ್ಷಿಯು ಮುಂದೆ ಅಡಿಯಿಡದಂತೆ ದಿಗ್ಬಂಧನ ಮಾಡಿದರು.

ಕಾಮಾಕ್ಷಿಯು ಸ್ವಲ್ಪವೂ ಚಲಿಸದಂತಾಗಲು, ಆಶ್ಚರ್ಯಪಟ್ಟು ಸುತ್ತಲೂ ನೋಡಿದಳು. ಆಚಾರ್ಯರನ್ನು ಕಂಡು, ದೇವಿಯು "ಮಹನೀಯನೆ! ನೀನಾರು? ನನ್ನನ್ನು ತಡೆಗಟ್ಟುವೆಯೇಕೆ? ನನ್ನನ್ನು ತಡೆಯಬಲ್ಲಶಕ್ತಿ ಪರಮೇಶ್ವರನಿಗಲ್ಲದೆ ಇನ್ನಾರಿಗೂ ಇಲ್ಲ. ನಿನ್ನನ್ನು ಸಾಕ್ಷಾತ್ ಪರಮೇಶ್ವರನೇ ಎಂದು ತಿಳಿಯುತ್ತೇನೆ. ನನ್ನನ್ನು ಬಿಟ್ಟು ಬಿಡು" ಎಂದಳು.

ಅದಕ್ಕೆ ಶಂಕರರು "ತಾಯೆ! ದಯಾಮಯಿಯಾದ ನೀನೇ ಈ ಕ್ರೂರ ಕಾರ್ಯಕ್ಕೆ ಕೈಹಾಕಿದರೆ ಪ್ರಪಂಚವು ಹೇಗೆ ಉದ್ಧಾರ

ವಾಗಬೇಕು. ನಿನ್ನಂತಹ ಮಹಾಮಹಿಮಳಿಗೆ ಇದು ಯೋಗ್ಯವಲ್ಲ. ಕೃಪೆಯಿಟ್ಟು ಶಾಂತರೂಪವನ್ನು ತಾಳು" ಎಂದು ಪ್ರಾರ್ಥಿಸಿದರು. ದೇವಿಯು ಶಾಂತರೂಪವನ್ನು ತಾಳಲು ಆಕೆಯನ್ನು ಸ್ವಸ್ಥಾನದಲ್ಲಿ ನಿಲ್ಲಿಸಿ, ಶಂಕರರು ಪುನಃ ಅಷ್ಟದಿಗ್ಬಂಧನೆಯನ್ನು ಮಾಡಿದರು. ಕಾಮಾಕ್ಷಿಯು ಅಲ್ಲಿಂದ ಈಚೆಗೆ ಬರದಂತೆ ಮಾಡಿ ದೇವಾಲಯದ ಮುಂಬಾಗಿಲ ಮುಂದೆ ಚಕ್ರವನ್ನು ಸ್ಥಾಪಿಸಿದರು. ಕಾಮಾಕ್ಷಿ ದೇವಿಗೆ ಸೌಮ್ಯರೀತಿಯ ಪೂಜೆಯನ್ನು ಸಲ್ಲಿಸಿ ಊರಿಗೆ ಬಂದಿದ್ದ ದೊಡ್ಡ ವಿಪತ್ತನ್ನು ತಪ್ಪಿಸಿದರು. "ಇನ್ನು ಮುಂದೆ ವಾಮಾಚಾರದ ಪೂಜೆಯನ್ನು ಮಾಡಕೂಡದು; ಸೌಮ್ಯರೀತಿಯ ಪೂಜೆಯನ್ನೇ ಮಾಡಬೇಕು" ಎಂದು ಅಲ್ಲಿನ ಜನಗಳಿಗೆ ತಿಳಿಸಿದರು.

ಶಂಕರರು ಕಂಚಿಯನ್ನು ಬಿಟ್ಟುಹೊರಟು ತಿರುಪತಿಯನ್ನು ಸೇರಿದರು. ತಿರುಪತಿಯಲ್ಲಿ ಶಂಕರರು ಪಾದಚಾರಿಗಳಾಗಿ ವೆಂಕಟೇಶ್ವರ ಸನ್ನಿಧಾನಕ್ಕೆ ಹೋಗುತ್ತಿರುವಾಗ 'ತ್ರಾಹಿ, ತ್ರಾಹಿ' ಎಂಬ ಕೂಗು ಅವರ ಕಿವಿಗೆ ಬಿತ್ತು. ಕರುಣಾಮಯರಾದ ಶಂಕರರು, ಶಿಷ್ಯರೊಡಗೂಡಿಯೇ ಆ ಶಬ್ದ ಬಂದ ಕಡೆಗೆ ಹೋದರು. ಅಲ್ಲಿ ಒಬ್ಬ ಕುಷ್ಠರೋಗಿಯು ಬಿದ್ದು ಹೊರಳಾಡುತ್ತಿದ್ದನು. ಅವನಿಂದ ಸಹಿಸಲಾರದ ದುರ್ಗಂಧ ಹೊರಹೊಮ್ಮುತ್ತಿತ್ತು. ಶಂಕರರ ಶಿಷ್ಯರು ಅಸಹ್ಯ ಪಟ್ಟುಕೊಂಡು ಅವನ ಹತ್ತಿರಕ್ಕೂ ಹೋಗಲಿಲ್ಲ. ಆದರೆ ಶಂಕರರು ಅವನ ಬಳಿಗೆ ಹೋಗಿ ಅವನನ್ನು ತಮ್ಮ ಅಮೃತಹಸ್ತದಿಂದ ಸವರುತ್ತಾ "ನೀನು ಯಾರಪ್ಪ? ನಿನ್ನ ಈ ಸ್ಥಿತಿಗೆ ಕಾರಣವೇನಪ್ಪ?" ಎಂದು ಕೇಳಿದರು. ಅದನ್ನು ಕಂಡು ಶಿಷ್ಯರು ಸ್ಥಂಬೀಭೂತರಾದರು.

ಆ ಕುಷ್ಠರೋಗಿಯು ಮೆಲ್ಲಮೆಲ್ಲಗೆ "ಸ್ವಾಮಿ ನಾನೊಬ್ಬ ಕುಷ್ಠರೋಗಿಯು. ನಾನು ಊರಿನಲ್ಲಿದ್ದರೆ ಊರಿಗೆ ಮಳೆ ಬರುವುದಿಲ್ಲವೆಂದು

ಭಾವಿಸಿ ಗ್ರಾಮದ ಜನರು ನನ್ನನ್ನು ನಿಷ್ಕರುಣೆಯಿಂದ ಊರ ಹೊರಗೆ ಅಟ್ಟಿದ್ದಾರೆ" ಎಂದು ತನ್ನ ಕತೆಯನ್ನು ಹೇಳಿಕೊಂಡನು.

ಶಂಕರರ ಅನುಗ್ರಹದಿಂದ ಅವನಿಗೆ ಕುಷ್ಠರೋಗವು ಪರಿಹಾರವಾಯಿತು ಮತ್ತು ಸುಜ್ಞಾನವೂ ಲಭಿಸಿತು. ಶಂಕರರು ಆತನಿಗೆ ಸಂನ್ಯಾಸವನ್ನು ಕೊಟ್ಟು ಉಡಂಕನೆಂದು ಹೆಸರಿಟ್ಟರು; ಮತ್ತು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡರು. ವೆಂಕಟೇಶ್ವರ ಸನ್ನಿಧಾನವನ್ನು ಸೇರಿ ಆ ದೇವ ದೇವನನ್ನು ಅರ್ಚಿಸಿ ಸ್ತುತಿಸಿದರು. ಅಲ್ಲಿ ಧನಾಕರ್ಷಕ ಯಂತ್ರವನ್ನು ಸ್ಥಾಪಿಸಿ ಅಲ್ಲಿಂದ ಮುಂದೆ ವಿದರ್ಭರಾಜ್ಯಕ್ಕೆ ಪ್ರಯಾಣ ಬೆಳೆಸಿದರು.

ವಿದರ್ಭರಾಜನು ಶಂಕರಾಚಾರ್ಯರನ್ನು ಭಯ, ವಿನಯ, ಭಕ್ತಿಗಳಿಂದ ಸ್ವಾಗತಿಸಿ ಆರಾಧಿಸಿದನು. ವಿದರ್ಭರಾಜನ ಆದರ, ಸತ್ಕಾರಗಳಿಂದ ಪ್ರೀತರಾದ ಆಚಾರ್ಯರು ಅಲ್ಲಿಂದ ಕರ್ಣಾಟಕಕ್ಕೆ ಹೋಗುವುದಾಗಿ ಯೋಚಿಸಲು ವಿದರ್ಭರಾಜನು "ಸ್ವಾಮಿನ್! ಅಲ್ಲಿ ಕ್ರಕಚನೆಂಬುವ ಒಬ್ಬ ದುಷ್ಟ ಕಾಪಾಲಿಕನಿರುವನು. ಆದುದರಿಂದ ಅಲ್ಲಿಗೆ ಹೋಗುವುದು ಉಚಿತವಲ್ಲ" ಎಂದು ಬಿನ್ನವಿಸಿದನು. ಆಗ ಸುಧನ್ವರಾಜನು ತಾನು ಜೊತೆಯಲ್ಲಿರುವಾಗ ಯಾವ ಭಯವೂ ಇಲ್ಲವೆಂದು ಹೇಳಲು, ಶಂಕರರು ಮನಸ್ಸಿನೊಳಗೆ ನಕ್ಕು, ಸುಧನ್ವ ರಾಜನೊಡನೆಯೂ ಮತ್ತು ಶಿಷ್ಯರೊಡನೆಯೂ ಹೊರಟು ಕರ್ಣಾಟಕ ಪ್ರಾಂತವನ್ನು ಬಂದು ಸೇರಿದರು.

ಶಂಕರಾಚಾರ್ಯರು ಬಂದಿರುವುದನ್ನು ಕೇಳಿ ಅಲ್ಲಿದ್ದ ಕೆಲವು ಭೈರವಾರ್ಚಕರು ಶಂಕರರ ಶಿಷ್ಯರ ಮೇಲೆ ಯುದ್ಧಕ್ಕೆ ಬಂದರು. "ನಾನಿರುವಾಗ ಯಾರ ಭಯವೇನು?" ಎಂದ ಸುಧನ್ವನೂ ಏನೂ

ಮಾಡಲಾಗಲಿಲ್ಲ. ಆಗ ಶಿಷ್ಯರಿಂದ ಪ್ರಾರ್ಥಿತರಾದ ಶಂಕರರು ಹುಂಕಾರ ಮಾತ್ರದಿಂದಲೇ ಅವರೆಲ್ಲರನ್ನೂ ನಾಶಮಾಡಿದರು.

ಆ ನಾಶಹೊಂದಿದವರ ಒಡೆಯನೇ ಕ್ರಕಚನೆಂಬುವವನು. ತನ್ನ ಅನುಯಾಯಿಗಳನ್ನು ಧ್ವಂಸಮಾಡಿದ ಶಂಕರರನ್ನು ಕೊಲ್ಲುವುದಾಗಿ ಯೋಚಿಸಿ ಕ್ರಕಚನು ಭೈರವನ ಪ್ರಸಾದವನ್ನು ಪಡೆಯುವುದಕ್ಕಾಗಿ ಒಂದು ಬಟ್ಟಲಲ್ಲಿ ಮಧ್ಯವನ್ನು ತುಂಬಿ ಭೈರವನಿಗೆ ನಿವೇದನ ಮಾಡಿದನು. ಭೈರವನು ಅತ್ಯಂತ ಕೋಪಗೊಂಡು, ಪ್ರತ್ಯಕ್ಷವಾಗಿ ಆ ಕ್ರಕಚನನ್ನೇ ಕೊಂದುಹಾಕಿದನು.

ಶಂಕರರು ತಮ್ಮ ದಿಗ್ವಿಜಯ ಯಾತ್ರೆಯನ್ನು ಮುಂದುವರೆಸಿ ಎರಡನೆಯ ಬಾರಿ ಗೋಕರ್ಣವನ್ನು ಸಂದರ್ಶಿಸಿದರು. ಅಲ್ಲಿ ನೀಲಕಂಠ ಪಂಡಿತನೆಂಬ ಶೈವಾಚಾರ್ಯನು ವಾಸಿಸುತ್ತಿದ್ದನು. ಅವನು ಶಂಕರಾಚಾರ್ಯರನ್ನು ವಾದದಲ್ಲಿ ಸೋಲಿಸಿ ಕೀರ್ತಿ ಪಡೆಯಬೇಕೆಂದು ಬಂದು, ಅವರೊಡನೆ ಕೆಲವು ದಿವಸಗಳವರೆಗೆ ವಾದಿಸಿದನು. ಆದರೆ ಅವರನ್ನು ಜಯಿಸಲಾರದೆ ಅಪಜಯ ಹೊಂದಿದನು. ಶಂಕರರು ಅದ್ವೈತವೇ ಸತ್ಯವೆಂದು ಸಾರಿದರು. ನೀಲಕಂಠ ಪಂಡಿತನು ಸೋಲನ್ನು ಒಪ್ಪಿಕೊಂಡು ಅದ್ವೈತ ಮತಾವಲಂಬಿಯಾದನು.

ಅಲ್ಲಿಂದ ಆಚಾರ್ಯರು ಶಿಷ್ಯ ಸಹಿತರಾಗಿ ಹೊರಟು ದ್ವಾರಕಾಪುರಿಯನ್ನು ಸೇರಿದರು. ಅಲ್ಲಿ ನೆಲೆಸಿರುವ ಶ್ರೀಕೃಷ್ಣ ಪರಮಾತ್ಮನನ್ನು ಸ್ವಹಸ್ತದಿಂದ ಪೂಜಿಸಿ ಸಂತೋಷಪಟ್ಟರು. ತಮ್ಮ ವೇದಾಂತ ಜ್ಞಾನ ಬಲದಿಂದ ಅಲ್ಲಿನ ವೈಷ್ಣವ ಪಂಡಿತರೆಲ್ಲರನ್ನೂ ವಾಗ್ವಾದದಲ್ಲಿ ಜಯಿಸಿದರು. ಶೃಂಗಗಿರಿಯಲ್ಲಿ ಸ್ಥಾಪಿಸಿದಂತಹ ಒಂದು ಆಮ್ನಾಯ ಮಠವನ್ನು ಅಲ್ಲಿಯೂ ಸ್ಥಾಪಿಸಿದರು.

ಶಂಕರರು ತಮ್ಮ ಅಮಾನುಷ ವಾಗ್ಬಲದಿಂದ ಕೇವಲ ವಿಷ್ಣೋಪಾಸಕಾರದ ವೈಷ್ಣವರು, ಮತ್ತು ಶಿವೋಪಾಸಕರಾದ ಶೈವರುಗಳನ್ನಲ್ಲದೆ ಸೂರ್ಯಾರಾಧಕರಾದ ಸೌರರನ್ನೂ, ಶಕ್ತಿ ದೇವತೆಯ ಔಪಾಸಕರಾದ ಶಾಕ್ತೇಯರನ್ನೂ, ಗಣಪತ್ಯಾರಾಧಕರಾದ ಗಾಣಪತ್ಯರನ್ನೂ ಅದ್ವೈತ ವಾದದಲ್ಲಿ ಗೆದ್ದರು. ಹೊರಗಿನ ಪೂಜಾದಿ ವಿಷಯಗಳಲ್ಲಿಯೇ ಹೆಚ್ಚು ಆಸಕ್ತರಾದ ಜನರಿಗೆ ಈಶ್ವರ, ವಿಷ್ಣು, ಸೂರ್ಯ, ಅಂಬಿಕಾ ಮತ್ತು ಗಣಪತಿಯರನ್ನು ಒಟ್ಟಿಗೆ ಪೂಜಿಸುವ "ಪಂಚಾಯತನ ಪೂಜಾ ವಿಧಿ"ಯನ್ನು ವಿವರವಾಗಿ ಉಪದೇಶಿಸಿದರು ಮತ್ತು ಅದನ್ನು ಭಾರತದ ಆದ್ಯಂತವಾಗಿ ಹರಡಿದರು.

ದಿಗ್ವಿಜಯವನ್ನು ಮುಂದುವರೆಸುತ್ತಾ, ಆಚಾರ್ಯರು ಉಜ್ಜಯಿನಿಯನ್ನು ಸೇರಿದರು ಅಲ್ಲಿರುವ "ಮಹಾಕಾಳೇಶ್ವರ" ಎಂಬ ಜ್ಯೋತಿರ್ಲಿಂಗವನ್ನು ಪೂಜಿಸಿ, ಸಂತೋಷಪಟ್ಟರು. ಅಲ್ಲಿ ಭಟ್ಟ ಭಾಸ್ಕರನೆಂಬೊಬ್ಬ ಪಂಡಿತನಿದ್ದನು. "ಜ್ಞಾನಿಗಳೂ ಸಹ ಕರ್ಮವನ್ನು ಆಚರಿಸಲೇಬೇಕು. ಜ್ಞಾನಿಯಾದ ಶ್ರೀಕೃಷ್ಣನೂ ಸಹ ತನ್ನ ಕರ್ಮಗಳನ್ನು ಲೋಪಲೇಶವಿಲ್ಲದಂತೆ ಆಚರಿಸಿದ್ದಾನೆ. ಮುಕ್ತಿಗೆ ಜ್ಞಾನವೇ ಸಾಕಾಗಿದ್ದರೆ ಜ್ಞಾನಿಯಾದ ಕೃಷ್ಣನು ನಿತ್ಯಕರ್ಮಾದಿಗಳನ್ನು ಏಕೆ ಮಾಡಬೇಕಾಗಿತ್ತು." ಎಂದು ಚರ್ಚಿಸಲಾರಂಭಿಸಿದ ಆ ಭಟ್ಟ ಭಾಸ್ಕರನನ್ನು ಶಂಕರರು ಈ ರೀತಿ ಸಮಾಧಾನಗೊಳಿಸಿದರು.

"ಶ್ರೀಕೃಷ್ಣನು ಜ್ಞಾನಿಯೆನ್ನುವುದರಲ್ಲಿ ಸಂದೇಹವಿಲ್ಲ. ನಿತ್ಯಮುಕ್ತನಾದ ಆತನು ಯಾವ ಕರ್ಮವನ್ನೂ ಮಾಡಬೇಕಾಗಿರಲಿಲ್ಲ, "ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೇ ಜನಾಃ" ಎಂಬಂತೆ. ದೊಡ್ಡವರು ಯಾವ ರೀತಿಯಲ್ಲಿ ಆಚರಿಸುತ್ತಾರೆಯೋ, ಅದರಂತೆಯೇ ಇತರ, ಸಾಮಾನ್ಯ ಜನರೂ ಸಹ ಅನುಸರಿಸುತ್ತಾರೆ. ಆದ್ದರಿಂದ

ಲೋಕದಲ್ಲಿರುವ ಜನಸಾಮಾನ್ಯರಿಗೆ ಮೇಲ್ಪಂಕ್ತಿಯಾಗಿರುವುದಕ್ಕೋಸ್ಕರ, ಕೃಷ್ಣನು ಕರ್ಮಗಳನ್ನು ಆಚರಿಸಿದನೇ ಹೊರತು, ಮೋಕ್ಷಾಪೇಕ್ಷೆಯಿಂದಲ್ಲ. ಅದ್ವೈತಜ್ಞಾನದ ಹೊರತು ಮತ್ತಾವುದರಿಂದಲೂ ಮೋಕ್ಷವನ್ನು ಪಡೆಯಲಾಗುವುದೇ ಇಲ್ಲ. ಜ್ಞಾನಿಯಾದವನು ಯಾವ ಕರ್ಮವನ್ನೂ ಆಚರಿಸಬೇಕಾಗಿಲ್ಲ."

ಶಂಕರರು ವೇದ, ಶ್ರುತಿ, ಪುರಾಣ, ಇತಿಹಾಸ, ಮೊದಲಾದುವುಗಳಿಂದ ಉದಾಹರಣೆ ಕೊಟ್ಟು, ಅನೇಕ ಯುಕ್ತಿವಾದಗಳನ್ನು ಹೇಳಿ ಮಹಾಪಂಡಿತನಾದ ಭಟ್ಟಭಾಸ್ಕರನನ್ನು ವಾದದಲ್ಲಿ ಸೋಲಿಸಿದರು. ಪರಾಜಯವನ್ನು ಹೊಂದಿದ ಭಟ್ಟಭಾಸ್ಕರನು ಶಂಕರರ ಶಿಷ್ಯನಾದನು.

ಶಂಕರಾಚಾರ್ಯರು ಎಲ್ಲ ಶಿಷ್ಯರೊಡಗೂಡಿ, ಉಜ್ಜಯಿನಿಯನ್ನು ಬಿಟ್ಟು, ಬಾಹ್ಲೀಕದೇಶವನ್ನು ಸೇರಿದರು. ಅಲ್ಲಿ ಪ್ರಬಲರಾಗಿದ್ದ ಜೈನ ಮತೀಯ ವಿದ್ವಾಂಸರನ್ನು ವಾದದಲ್ಲಿ ಖಂಡಿಸಿ ವಿಜಯಿಗಳಾದರು.

ಪ್ರಕರಣ ೧೮

## ಗುಪ್ತನ ಕಪಟ

ಆನಂತರ, ಶಂಕರರು ಬ್ರಹ್ಮಪುತ್ರಾನದಿಯ ತೀರದಲ್ಲಿರುವ ಕಾಮರೂಪವೆಂಬ (ಈಗಿನ ಅಸ್ಸಾಂ) ದೇಶವನ್ನು ಸೇರಿದರು. ಅಲ್ಲಿದ್ದ ಕೆಲವು ದಿವಸಗಳಲ್ಲಿ ಒಂದು ದಿನ, ಶಂಕರರು ನದಿಯ ಕಡೆಗೆ ಹೋದರು. ಅಲ್ಲಿ ನದಿಯ ಮರಳು ದಿಬ್ಬದ ಮೇಲೆ, ಸಮಾಧಿಸ್ಥರಾಗಿ ಆನಂದಪರವಶರಾದ ಗೌಡಪಾದಯತೀಶ್ವರರನ್ನು ಕಂಡರು. ಶಂಕರರು ಅವರನ್ನು ನಮಸ್ಕರಿಸಿ ಸ್ತುತಿಸಿದರು. ಶಂಕರರು ಬಂದಿರುವುದನ್ನು ತಿಳಿದ ಗೌಡಪಾದರು ಸಮಾಧಿಯಿಂದೆಚ್ಚೆತ್ತು ಶಂಕರರನ್ನು ಆಶೀರ್ವದಿಸಿದರು. ಪರಮ ಸಂತುಷ್ಟರಾದ ಶಂಕರರು ಅವರನ್ನು ಆಶ್ರಮಕ್ಕೆ ಕರೆತಂದು ಆದರಿಸಿದರು.

ಶಂಕರರು ತಾವು ರಚಿಸಿದ್ದ ಬ್ರಹ್ಮಸೂತ್ರಭಾಷ್ಯವನ್ನು ಅವರಿಗೆ ಕೊಡಲು ಗೌಡಪಾದರು ಅದನ್ನು ನೋಡಿ ಆನಂದಿಸಿ "ನನ್ನ ಶಿಷ್ಯನಾದ, ಮತ್ತು ನಿನ್ನ ಗುರುವಾದ ಗೋವಿಂದಭಗವತ್ಪಾದನಿಂದ ನಾನು ಇದನ್ನು ತಿಳಿದಿದ್ದೆ" ಎಂದು ಹೇಳಿದರು. ಶಂಕರರು "ಗುರುಚರಣದಲ್ಲಿ ಅಚಂಚಲವಾದ ಭಕ್ತಿಯನ್ನು ಕರುಣಿಸಿ" ಎಂದು ಬೇಡಿಕೊಳ್ಳಲು, "ಹಾಗೆಯೇ ಆಗಲಿ" ಎಂದು ಅನುಗ್ರಹಿಸಿ ಗೌಡಪಾದರು ಹೊರಟು ಹೋದರು.

ಆ ಕಾಮರೂಪ ದೇಶದಲ್ಲಿ ಶಕ್ತ್ಯಾರಾಧಕರಾದ ಶಾಕ್ತೇಯರು ವಾಸವಾಗಿದ್ದರು. ಅವರು ಜಟಾಧಾರಣ ಮಾಡುವ ಪದ್ಧತಿಯುಳ್ಳವರಾಗಿದ್ದರು. ಶಂಕರರು ಅನೇಕ ವಿಧವಾಗಿ ಬೋಧಿಸಿ ಆ ಪದ್ಧತಿಯನ್ನು ತಪ್ಪಿಸಿದರು. ಅಭಿನವಗುಪ್ತನೆಂಬುವನು ಆ ಶಾಕ್ತೇಯರ ಗುಂಪಿನ ಒಡೆಯನಾಗಿದ್ದನು. ಅವನು "ಹೇಗಾದರೂ ಮಾಡಿ ಆಚಾರ್ಯರನ್ನು ಸೋಲಿಸಬೇಕು" ಎಂದು ಮನಸ್ಸು ಮಾಡಿದನು.

"ಶಂಕರರನ್ನು ವಾದದಲ್ಲಿ ಗೆಲ್ಲುವುದು ಸ್ವಪ್ನದಲ್ಲಿಯೂ ಆಗದ ಮಾತು" ಎಂದು ಅವನಿಗೆ ತಿಳಿದಿತ್ತು. ಆದ್ದರಿಂದ ಶಂಕರರನ್ನು ಮೋಸದಿಂದ ಸೋಲಿಸುವುದಾಗಿ ಯೋಚಿಸಿದನು. ಅಂತೆಯೇ ಕುಟಿಲ ಮತಿಯಾದ ಆ ಅಭಿನವಗುಪ್ತನು, ಶಂಕರರ ಪರಮ ಭಕ್ತನಂತೆ ನಟಿಸಿ ಅವರ ಶಿಷ್ಯನಾದನು.

ಅಭಿನವಗುಪ್ತನು ವಾಮಾಚಾರಿ, ಅಂದರೆ ಮಾಟ, ಮಂತ್ರಗಳನ್ನು ಮಾಡುವುದರಲ್ಲಿ ನಿಪುಣ. ಆ ನೀಚನು ತನ್ನ ವಿದ್ಯೆಯನ್ನು ಶಂಕರರ ಮೇಲೆಯೂ ಪ್ರಯೋಗಿಸಿಬಿಟ್ಟನು. ಅದರಿಂದ ಶಂಕರರಿಗೆ ಭಗಂದರ ರೋಗವು ಪ್ರಾಪ್ತವಾಯಿತು. ಯಾರು ಎಷ್ಟು ಪ್ರಯತ್ನ ಪಟ್ಟಾಗ್ಯೂ ರೋಗವು ವಾಸಿಯಾಗಲಿಲ್ಲ. ಶಂಕರರಾದರೋ "ಪ್ರಾರಬ್ಧಕರ್ಮವನ್ನು ಅನುಭವಿಸಿದಲ್ಲದೆ ತೀರದು. ಸುಖ ದುಃಖಗಳನ್ನೂ ಜಯಾಪಜಯ

ಗಳನ್ನೂ ಒಂದೇ ರೀತಿಯಲ್ಲಿ ಕಾಣಬೇಕು" ಎಂದು ಸಮಾಧಾನದಿಂದಲೇ ಇದ್ದರು. ಆದರೆ ಪದ್ಮಪಾದಾದಿ ಶಿಷ್ಯರುಗಳಿಂದ ಪ್ರಾರ್ಥಿಸಲ್ಪಟ್ಟ ಶಂಕರರು, ಶಿಷ್ಯರ ಸಮಾಧಾನಕ್ಕಾಗಿ, ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದರು. ಅಶ್ವಿನೀದೇವತೆಗಳು ಪ್ರತ್ಯಕ್ಷರಾದರು.

ದೇವವೈದ್ಯರಾದ ಅಶ್ವಿನೀ ದೇವತೆಗಳು ಪ್ರತ್ಯಕ್ಷರಾಗಿ " ಶಂಕರ ! ಇದು ನಿನ್ನ ಮಾರಣಕ್ಕಾಗಿ ಮಾಡಿಸಿರುವ ಅಭಿಚಾರವು (ಮಾಟ) ಕ್ರೂರ ದೇವತೆಗಳಿಗೂ ನಮಗೂ ಬಹಳ ದೂರ. ಇದನ್ನು ನಾವು ಹೋಗಲಾಡಿಸಲಾರೆವು. ನಿನ್ನ ಪ್ರಿಯ ಶಿಷ್ಯನಾದ ಪದ್ಮಪಾದನಿಗೆ ಈ ವಿದ್ಯೆಯು ತಿಳಿದಿದೆ. ಆತನಿಂದ ಪ್ರತ್ಯುಚ್ಚಾಟನೆ ಮಾಡಿಸಿದರೆ ನಿನ್ನ ಈ ರೋಗವು ಗುಣವಾಗುತ್ತದೆ" ಎಂದು ತಿಳಿಸಿ ಅಂತರ್ಧಾನರಾದರು.

ಅದರಂತೆ ಪದ್ಮಪಾದರು ಪ್ರತ್ಯುಚ್ಚಾಟನೆ ಮಾಡಲು ಶಂಕರರಿಗೆ ಪ್ರಾಪ್ತವಾಗಿದ್ದ ಭಗಂದರ ರೋಗವು ಹೋಗಿ ಅದಕ್ಕೆ ಕಾರಣನಾದ ಅಭಿನವಗುಪ್ತನಿಗೇ ಆ ರೋಗವು ಬಡಿಯಿತು. ಆ ರೋಗವೇ ಅವನಿಗೆ ಮೃತ್ಯುವಾಯಿತು. ಅದರಿಂದ ನರಳಿ ನರಳಿ ಅವನು ಸತ್ತನು.

ಶಂಕರರು ಅಭಿನವಗುಪ್ತನನ್ನೂ ಗೆದ್ದಂತೆಯೇ ಆಯಿತಲ್ಲವೆ?

## ಪ್ರಕರಣ ೧೯

## ಆಚಾರ್ಯರು ಸರ್ವಜ್ಞ ಪೀಠದಲ್ಲಿ

ಕಾಶ್ಮೀರದಲ್ಲಿರುವ ಶಾರದಾಂಬಾ ದೇವಾಲಯದಲ್ಲಿ 'ಸರ್ವಜ್ಞ ಪೀಠ'ವೆಂಬ ಒಂದು ಪೀಠವಿದೆಯೆಂದೂ, ಅದನ್ನು ಸರ್ವಜ್ಞರಾದವರು (ಎಲ್ಲವನ್ನೂ ತಿಳಿದವರು) ಮಾತ್ರ ಹತ್ತಬಹುದೆಂದೂ, ಮತ್ತು ಅಂದಿನ ವರೆಗೆ ಯಾವ ದಾಕ್ಷಿಣಾತ್ಯನೂ ಅದನ್ನು ಹತ್ತಿಲ್ಲವೆಂದೂ ಶಂಕರರ

ಕಿವಿಗೆ ಬಿತ್ತು. ಶಂಕರರು ದಕ್ಷಿಣ ದೇಶದವರೇ ಅಲ್ಲವೇ ? ದಕ್ಷಿಣ ದೇಶದವರಿಗೆ ಕಳಂಕ ಪ್ರಾಯವಾದ ಆ ಅಪವಾದವನ್ನು ತೊಡೆದು ಹಾಕಲು ತಾವೇ ಆ ಸರ್ವಜ್ಞ ಪೀಠವನ್ನು ಏರುವುದಾಗಿ ನಿಶ್ಚಯಿಸಿ ಹೊರಟರು.

ಶಂಕರರು ಕಾಶ್ಮೀರವನ್ನು ಸೇರಿ ಶಾರದಾ ದೇವಾಲಯದ ದಕ್ಷಿಣ ದ್ವಾರದ ಮುಂದೆ ಹೋಗಿ ನಿಂತರು. ಕೂಡಲೇ ಎರಡು ಬಾಗಿಲುಗಳೂ ತೆರೆದುವು ; ಶುಭಶಕುನವಾಯಿತು. ಶಂಕರರು ಒಳಹೊಕ್ಕು, ಸಾಲು ಕಟ್ಟಿ ನಿಂತಿರುವ, ವಿವಿಧ ಮತಾವಲಂಬಿಗಳಾದ ಅನೇಕ ವಿದ್ವಾಂಸರನ್ನು ಕಂಡರು.

ಅವರು "ಈ ಪೀಠವನ್ನು ಹತ್ತ ಬಯಸುವವರು ಎಲ್ಲವನ್ನೂ ತಿಳಿದ ಸರ್ವಜ್ಞರಾಗಿರಬೇಕು. ನೀವು ಸರ್ವಜ್ಞರಾಗಿದ್ದ ಪಕ್ಷಕ್ಕೆ ನಮ್ಮೆಲ್ಲರ ಮತಗಳಲ್ಲಿರುವ ವೈಶಿಷ್ಟ್ಯಗಳನ್ನು ತಿಳಿಸಿ ನಮ್ಮ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಹೇಳಬೇಕು. ಅನಂತರದಲ್ಲಿ ಪೀಠವನ್ನೇರಿ ಕೂಡಬಹುದು." ಎಂದು ತಿಳಿಸಿದರು.

ಶಂಕರರು ಹಾಗೆಯೇ ಆಗಲೆಂದು ಒಪ್ಪಿದರು. "ಜೈನರು, ಬೌದ್ಧರು, ವೈಶೇಷಿಕರು, ವೈಷ್ಣವರು, ಶೈವರು, ಸಾಂಖ್ಯ ಶಾಸ್ತ್ರ ಪ್ರವೀಣರು, ನಯಾಯಿಕರು, ತಾರ್ಕಿಕರು, ವ್ಯಾಕರಣ ಪಂಡಿತರು, ಮೀಮಾಂಸ ವಿದ್ವಾಂಸರು, ಜ್ಯೋತಿಷಾದಿ ಪ್ರವೀಣರು – ಎಲ್ಲರೂ ತಮ್ಮ ತಮ್ಮ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಪಡೆದ, ಶಂಕರರ ಮುಂದೆ ತಲೆ ಬಗ್ಗಿಸಿದರು. ಅಲ್ಲಿದ್ದ ಎಲ್ಲರೂ "ಶಂಕರರು ಸರ್ವಜ್ಞರು" ಎಂದು ಏಕಕಂಠದಿಂದ ಘೋಷಿಸಿದರು.

ಶಂಕರರು ಮಂದಹಾಸವನ್ನು ಬೀರುತ್ತಾ, ಮೆಲುನಡಿಗೆಯಿಡುತ್ತಾ ಸರ್ವಜ್ಞ ಪೀಠವನ್ನು ಏರುವುದಕ್ಕಾಗಿ ಅದರ ಸಮೀಪಕ್ಕೆ ಹೋದರು.

ಶಂಕರರು ಪೀಠದ ಹತ್ತಿರ ಬರುತ್ತಲೇ "ಸರ್ವಜ್ಞ ಪೀಠವನ್ನು ಹತ್ತುವುದಕ್ಕೆ ನೀನು ಅರ್ಹನಲ್ಲ. ಇದನ್ನು ಅಲಂಕರಿಸಲು ಸರ್ವಜ್ಞತ್ವ ವೊಂದೇ ಸಾಲದು ; ಶುಚಿತ್ವವೂ ಇರಬೇಕು. ನೀನು ಸಂನ್ಯಾಸಿ ಯಾದರೂ, ಅಮರುಕ ರಾಜಪತ್ನಿಯರ ಜೊತೆಯಲ್ಲಿದ್ದು ಕಾಮ ಕಲೆಯನ್ನು ಕಲಿತಿರುವೆ. ಇದು ನಿನ್ನಲ್ಲಿ ಕಳಂಕಪ್ರಾಯವಾಗಿದೆ" ಎಂದು ಆಕಾಶವಾಣಿಯಾಯಿತು.

ಶಂಕರರು ಮುಂದಿದ್ದ ಶಾರದಾ ವಿಗ್ರಹವನ್ನು ಕುರಿತು "ಎಲ್ಲವನ್ನೂ ತಿಳಿದ ಶಾರದೆ, ನಾನು ಶುಚಿರ್ಭೂತನೆಂದು ನಿನಗೆ ತಿಳಿದಿದ್ದರೂ ಅದನ್ನು ಎಲ್ಲರಿಗೂ ತಿಳಿಯಪಡಿಸುವುದಕ್ಕಾಗಿ ಹೀಗೆ ಪ್ರಶ್ನಿಸುತ್ತಿದ್ದೀಯಾ ? ಆಗಲಿ, ನಿನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳುತ್ತೇನೆ ; ಶಂಕೆಗೆ ಸಮಾಧಾನವನ್ನು ಹೇಳುತ್ತೇನೆ. ಅಮರುಕ ರಾಜನ ಪತ್ನಿಯರ ಜೊತೆಯಲ್ಲಿದ್ದಾಗ ನನ್ನ ಮನಸ್ಸು ಕಿಂಚಿತ್ತಾದರೂ ಸ್ಖಲಿತವಾಗಲಿಲ್ಲ. ಸಂನ್ಯಾಸಿಯಾದವನಿಗೆ ಯಾವ ರೀತಿಯಲ್ಲಿ ಮನಸ್ಸು ಕಾಮಾದಿಗಳಿಂದ ದೂರವಿರಬೇಕೋ, ಹಾಗೆಯೇ ನನ್ನ ಮನಸ್ಸು ಕಾಮಾದಿಗಳ ಯೋಚನೆಯಿಂದ ದೂರವಿತ್ತು. "ಮನಏವ ಮನುಷ್ಯಾ ಣಾಂ ಕಾರಣಂ ಬಂಧ ಮೋಕ್ಷಯೋಃ" ಎಂಬಂತೆ ಮನುಷ್ಯನು ಪತಿತ ನಾಗುವುದಕ್ಕೂ ಉದ್ಧಾರವಾಗುವುದಕ್ಕೂ ಅವನ ಮನಸ್ಸೇ ಕಾರಣವು. ಮನಸ್ಸನ್ನು ಎತ್ತೆಂದರತ್ತ ಹರಿಯಬಿಟ್ಟು ಇಂದ್ರಿಯನಿಗ್ರಹ ಮಾಡ ದವನು ಎಂದಿಗೂ ಸಂನ್ಯಾಸಿಯಾಗಲಾರನು. ನನ್ನ ಮನಸ್ಸು ಸ್ತ್ರೀ ಮೋಹದಿಂದ ಸ್ವಲ್ಪವೂ ಕಲಂಕಿತವಾಗಲಿಲ್ಲವಾದ್ದರಿಂದ ನನ್ನ ಶುಚಿತ್ವಕ್ಕೆ ಧಕ್ಕೆ ಬಂದಿಲ್ಲ.

"ಅದೂ ಅಲ್ಲದೆ ಶುಚಿತ್ವ-ಅಶುಚಿತ್ವಗಳು ದೇಹಕ್ಕೆ ಹೊರತು ಆತ್ಮನಿಗಲ್ಲ. ಈ ನನ್ನ ದೇಹವು ಶುಚಿಯಾಗಿಯೇ ಇದೆ. ಯಾವ




ಸರ್ವಜ್ಞಪೀಠಾರೂಢರಾದ ಶ್ರೀ ಶಂಕರರು

ದೇಹದಿಂದ ನಾವು ಪಾಪವನ್ನು ಮಾಡುತ್ತೇವೆಯೋ ಆ ದೇಹವು ಅಶುಚಿಯೇ ಹೊರತು ಬೇರೆ ಜನ್ಮದಲ್ಲಿ ಬರುವ ದೇಹವೂ ಆ ಪಾಪದಿಂದ ಅಶುಚಿಯಾಗಲಾರದು. ಹೋದ ಜನ್ಮದಲ್ಲಿ ಕುಂಟ ನಾಗಿದ್ದವನು ಈ ಜನ್ಮದಲ್ಲಿ ಕಾಲುಗಳನ್ನುಳ್ಳವನಾಗಿದ್ದರೆ, ಅವನನ್ನು ಈ ಜನ್ಮದಲ್ಲಿಯೂ ಕುಂಟನೆಂದು ಕರೆಯಲಾಗದು. ಹಿಂದಿನ ದೇಹವು ಹೋದ ದಿವಸವೇ ಅವನಿಗೆ ಕುಂಟನೆಂಬ ಹೆಸರೂ ಹೊರಟು ಹೋಯಿತು. ಅದೇ ರೀತಿಯಲ್ಲಿ ಹೋದಜನ್ಮದಲ್ಲಿ ಚಂಡಾಲನಾಗಿ ಹುಟ್ಟಿದವನು ಈ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿರಬಹುದು. ಚಂಡಾಲ-ಜನ್ಮದೊಡನೆಯೇ ಅವನ ದೇಹದ ಅಶುಚಿತ್ವವೂ ನಾಶ ವಾಯಿತು. ಈ ಜನ್ಮದಲ್ಲಿ ಅವನು ಬ್ರಾಹ್ಮಣನು ; ಅವನ ದೇಹವು ಶುಚಿಯಾದದ್ದು.

"ನನ್ನ ಆತ್ಮವಾದರೋ ಎಂದೆಂದಿಗೂ ಶುಚಿಯು. ಈ ನನ್ನ ದೇಹವೂ ಶುಚಿಭೂರ್ತವಾದದ್ದು ; ಏಕೆಂದರೆ ನಾನು ಸ್ತ್ರೀಯರ ಜೊತೆಯಲ್ಲಿದ್ದುದು ಈ ದೇಹದಿಂದಲ್ಲ ; ಅಮರುಕ ರಾಜನ ದೇಹದಿಂದ. ಆದ್ದರಿಂದ ನನಗೆ ಈ ಸರ್ವಜ್ಞ ಪೀಠವನ್ನು ಏರಿ ಕುಳಿತುಕೊಳ್ಳುವುದಕ್ಕೆ ಅಪ್ಪಣೆಯನ್ನು ಕೊಡು" ಎಂದು ನಿಸ್ಸಂಕೋಚವಾಗಿ ಹೇಳಿದರು.

ಆಗ 'ಧಡಾರ್' ಎಂಬ ಶಬ್ದವಾಯಿತು. ಕೋಟಿ ಮಿಂಚುಗಳು ಒಮ್ಮೆಲೇ ಸುಳಿದಷ್ಟು ಬೆಳಕಾಯಿತು. ಶಾರದಾ ದೇವಿಯು ಶಂಕರರ ಮುಂದೆ ಪ್ರತ್ಯಕ್ಷಳಾಗಿ ನಿಂತಳು. ಅಲ್ಲಿ ನೆರೆದಿದ್ದ ಪಂಡಿತರುಗಳೆಲ್ಲ ಇದನ್ನು ಕಂಡು ಚಕಿತರಾದರು.

ಶಾರದೆಯು ಶಂಕರರನ್ನು ಕುರಿತು "ಶಂಕರ! ನಿನ್ನಲ್ಲಿ ಕಳಂಕ ವೆಂಬುದು ಕಿಂಚಿತ್ತಾದರೂ ಇಲ್ಲ. ಆದರೂ, ಅದು ಸರ್ವರಿಗೂ ವಿದಿತವಾಗಲಿ ಎಂದು ಈ ರೀತಿ ತಡೆಗಟ್ಟಿದೆ. ಸರ್ವಜ್ಞ ಪೀಠವನ್ನು

ಲಂಕರಿಸಲು ಸರ್ವಜ್ಞಾವತಾರನಾದ (ಈಶ್ವರಾವತಾರನಾದ) ನೀನಲ್ಲದೆ ಮತ್ತಾರು ಸಮರ್ಥರು? ಇನ್ನಾರು ಯೋಗ್ಯರು? ಈ ಗೌರವಕ್ಕೆ ನೀನು ಸರ್ವ ವಿಧದಲ್ಲಿಯೂ ಅರ್ಹನು. ಪೀಠವನ್ನು ಹತ್ತು; ದಶದಿಶೆಗಳಲ್ಲಿಯೂ ನಿನ್ನ ಕೀರ್ತಿಯು ಹರಡುವುದು" ಎಂದು ಹೇಳಿದಳು.

ಸುರೇಶ್ವರ, ಹಸ್ತಾಮಲಕ, ತೋಟಕ, ಪದ್ಮಪಾದ, ಮತ್ತು ಉದಂಕರೇ ಮೊದಲಾದ ಶಿಷ್ಯರು ಹೊಗಳುತ್ತಿರಲು, ಸರ್ವಜ್ಞ ಶಂಕರರು ಸರ್ವಜ್ಞ ಪೀಠವನ್ನು ಹತ್ತಿ ಕುಳಿತರು. ದೇವತೆಗಳು ಅಂತರಿಕ್ಷದಲ್ಲಿ ದುಂದುಭಿಯನ್ನು ಮೊಳಗಿಸಿದರು; ಪುಷ್ಪ ವೃಷ್ಟಿಯನ್ನು ಸುರಿಸಿದರು. ಎಲ್ಲ ಪಂಡಿತರೂ ಎದ್ದು ನಿಂತು ತಮ್ಮ ಶಿರವನ್ನು ಬಾಗಿ ಗೌರವವನ್ನು ಸೂಚಿಸಿದರು. ಶಾರದೆಯು ಶಂಕರರನ್ನು ಹರಸಿ ಅಂತರ್ಧಾನಳಾದಳು. ಶಂಕರರ ಕೀರ್ತಿಯು ಎಲ್ಲೆಡೆಯಲ್ಲಿಯೂ ಹರಡಿತು.

## ಪ್ರಕರಣ ೨೦

## ಕೊನೆಯ ದಿವಸಗಳು

ತಾವು ಪ್ರಚಾರಮಾಡಿದ ಅದ್ವೈತತತ್ವವು ಭೂಲೋಕದಲ್ಲಿ ಎಂದೆಂದಿಗೂ ಉಳಿದಿರಲಿ ಎಂಬ ಉದ್ದೇಶದಿಂದ ಶಂಕರರು ಆ ತತ್ವವನ್ನು ಉಪದೇಶಿಸುವ ಮಠಗಳನ್ನು ಸ್ಥಾಪಿಸಿದರು. ಶಂಕರರು ಸ್ಥಾಪಿಸಿದ ಮಠಗಳಲ್ಲಿ ಬದರಿ, ಜಗನ್ನಾಥ, ದ್ವಾರಕಾ ಮತ್ತು ಶೃಂಗಗಿರಿಯಲ್ಲಿರುವ ನಾಲ್ಕು ಮಠಗಳು ಮುಖ್ಯವಾದುವು ಮತ್ತು ಪ್ರಸಿದ್ಧಿಯಾದುವು.

ಆಚಾರ್ಯರು ಮಠಗಳನ್ನು ಸ್ಥಾಪಿಸಿ, ಅವುಗಳ ಮೇಲ್ವಿಚಾರಣೆಗಾಗಿ ತಮ್ಮ ಪ್ರೀತಿಯ ಶಿಷ್ಯರನ್ನು ನಿಯಮಿಸಿದರು ಮತ್ತು ತಮ್ಮ ಅನಂತರ ಅದ್ವೈತತತ್ವವನ್ನು ಪ್ರಚಾರಮಾಡುವ ಕಾರ್ಯವನ್ನು ಆಜ್ಞಾಪಿ

ಸಿದರು. ಮಂಡನಮಿಶ್ರರ ಪತ್ನಿಯಾಗಿ ಅವತರಿಸಿದ್ದ ಶಾರದೆಯು ಶೃಂಗೇರಿಯಲ್ಲಿ ನೆಲಸಿದ್ದ ಕಾರಣ, ಶಂಕರರು ಮಂಡನಮಿಶ್ರ (ಸುರೇಶ್ವರಾಚಾರ್ಯ)ರನ್ನೇ ಅಲ್ಲಿನ ಪೀಠಾಧಿಕಾರಿಗಳನ್ನಾಗಿ ಮಾಡಿದರು. ಬದರೀ ಮಠದಲ್ಲಿ ಹಸ್ತಾಮಲಕರನ್ನೂ, ಜಗನ್ನಾಥದಲ್ಲಿ ತೋಟಕಾಚಾರ್ಯರನ್ನೂ ಮತ್ತು ದ್ವಾರಕಾಕ್ಷೇತ್ರದಲ್ಲಿ ಪದ್ಮಪಾದರನ್ನೂ ಇರಿಸಿದರು.

ಶ್ರೀಮಚ್ಛಂಕರಭಗವತ್ಪಾದರು ಉತ್ತರದಿಕ್ಕಿನಲ್ಲಿ ಬದರಿಕಾಶ್ರಮದಲ್ಲಿಯೂ, ಪಶ್ಚಿಮದಲ್ಲಿ ದ್ವಾರಕಾನಗರದಲ್ಲಿಯೂ, ಪೂರ್ವದಲ್ಲಿ ಜಗನ್ನಾಥಕ್ಷೇತ್ರದಲ್ಲಿಯೂ, ಮತ್ತು ದಕ್ಷಿಣದಿಕ್ಕಿನಲ್ಲಿ ಶೃಂಗಗಿರಿಯಲ್ಲಿಯೂ ಆಮ್ನಾಯ ಮಠಗಳನ್ನು ಸ್ಥಾಪಿಸಿ, ನಾಲ್ಕು ದಿಕ್ಕುಗಳಲ್ಲಿಯೂ ತಮ್ಮ ಕೀರ್ತಿಧ್ವಜವನ್ನು ಹಾರಾಡಿಸಿದರು.

ಶಂಕರರು ಮಠಗಳನ್ನಲ್ಲದೆ ಲಿಂಗಗಳನ್ನೂ, ಚಕ್ರಗಳನ್ನೂ ಸ್ಥಾಪಿಸಿದರು. ನೇಪಾಳದಲ್ಲಿ ‘ ನೀಲಕಂಠ ’ ವೆಂಬ ಕ್ಷೇತ್ರವಿದೆ. ಅಲ್ಲಿ ‘ ವರಲಿಂಗ ’ ವನ್ನೂ ಹಿಮಾಲಯದ ತಪ್ಪಲು ಪ್ರದೇಶದಲ್ಲಿರುವ ಕೇದಾರ ಕ್ಷೇತ್ರದಲ್ಲಿ ‘ ಮುಕ್ತಿಲಿಂಗ ’ ವನ್ನೂ, ಚಿದಂಬರಕ್ಷೇತ್ರದಲ್ಲಿ ‘ ಶಿವಲಿಂಗ ’ ವನ್ನೂ, ಶೃಂಗಗಿರಿಯಲ್ಲಿ ‘ ಭೋಗಲಿಂಗ ’ ವನ್ನೂ ಕಾಂಚಿಕ್ಷೇತ್ರದಲ್ಲಿ ‘ ಯೋಗಲಿಂಗ ’ ವನ್ನೂ ಸ್ಥಾಪಿಸಿದರು. ಅಲ್ಲದೆ ತಿರುಪತಿಯಲ್ಲಿ “ ಧನಾಕರ್ಷಕಯಂತ್ರ ” ವನ್ನೂ ಶ್ರೀರಂಗಕ್ಷೇತ್ರದಲ್ಲಿ “ ಜನಾಕರ್ಷಕ ಯಂತ್ರ ” ವನ್ನೂ ಮೂಕಾಂಬಿಕಾಕ್ಷೇತ್ರದಲ್ಲಿ “ ಶ್ರೀಚಕ್ರಯಂತ್ರ ” ವನ್ನೂ ಶಂಕರರು ಸ್ಥಾಪಿಸಿದರು.

ಶೈವಮತದಲ್ಲಿದ್ದ ಲಿಂಗಧಾರಣ ಪದ್ಧತಿಯನ್ನೂ, ವೈಷ್ಣವರಲ್ಲಿದ್ದ ಮುದ್ರಧಾರಣ ಪದ್ಧತಿಯನ್ನೂ ಶಾಕ್ತೇಯರಲ್ಲಿದ್ದ ಜಟಾಧಾರಣ ಪದ್ಧತಿಯನ್ನೂ ಸೌರರಲ್ಲಿದ್ದ ರಕ್ತಗಂಧಾರ್ಚನಾ ಪದ್ಧತಿಯನ್ನೂ

ಗಾಣಾಪತ್ಯರಲ್ಲಿದ್ದ ಶೇಷಭೋಜನದ ಪದ್ಧತಿಯನ್ನೂ ಕಾಪಾಲಿಕಮತದಲ್ಲಿದ್ದ ಸುರಾಸೇವನೆಯ ಪದ್ಧತಿಯನ್ನೂ ತಪ್ಪಿಸಿ "ಷಣ್ಮತಸ್ಥಾಪನಾಚಾರ್ಯ" ಎಂಬ ಬಿರುದನ್ನು ಪಡೆದ ಶಂಕರರು ತಮ್ಮ ಕೇವಲ ೩೨ ವರ್ಷದ ಆಯುಃಪರಿಮಿತಿಯಲ್ಲಿ ಅನೇಕ ಅದ್ಭುತವಾದ ಕಾರ್ಯಗಳನ್ನು ಮಾಡಿದರು ; ಅನೇಕ ಗ್ರಂಥಗಳನ್ನು ರಚಿಸಿದರು.

ಶಂಕರರಿಂದ ರಚಿಸಲ್ಪಟ್ಟುವೆಂದು ಹೇಳಲ್ಪಡುವ ಕೃತಿಗಳು ಸುಮಾರು ೩೮೪. ಅವುಗಳೆಲ್ಲವೂ ಅವರಿಂದಲೇ ರಚಿಸಲ್ಪಟ್ಟ ಕೃತಿಗಳಲ್ಲ ; ಕೆಲವು ಪ್ರಕ್ಷಿಪ್ತಗಳೂ ಇವೆ, ಎಂಬುದು ನಿರ್ವಿವಾದವಾದ ವಿಷಯ. ಶಂಕರರ ಗ್ರಂಥಗಳನ್ನು (೧) ಭಾಷ್ಯ, ವ್ಯಾಖ್ಯೆ, ವಾರ್ತಿಕಗಳು, (೨) ಸ್ತೋತ್ರಗಳು ಮತ್ತು (೩) ಸಂವಾದ ರೂಪದ ಮತ್ತು ಇತರ ಗ್ರಂಥಗಳು ಎಂದು ಮೂರು ಭಾಗಗಳಾಗಿ ವಿಂಗಡಿಸಬಹುದು.

ಶಂಕರರು ಬ್ರಹ್ಮಸೂತ್ರ ಭಾಷ್ಯ ಮತ್ತು ಗೀತಾ ಭಾಷ್ಯಗಳನ್ನು ರಚಿಸಿದುದಲ್ಲದೆ, (೧) ಈಶ (೨) ಕೇನ (೩) ಕಠ (೪) ಪ್ರಶ್ನ (೫) ಮುಂಡಕ (೬) ಮಾಂಡೂಕ್ಯ (೭) ತೈತ್ತಿರೀಯ (೮) ಐತರೇಯ (೯) ಛಾಂದೋಗ್ಯ ಮತ್ತು (೧೦) ಬೃಹದಾರಣ್ಯಕಗಳೆಂಬ ದಶೋಪನಿಷತ್ತುಗಳಿಗೆ ಭಾಷ್ಯಗಳನ್ನು ರಚಿಸಿದರು. ಗೌಡಪಾದರಿಂದ ರಚಿತವಾದ ಮಂಡೂಕ್ಯಕಾರಿಕೆಗೂ ಶಂಕರರು ತಮ್ಮ ಭಾಷ್ಯವನ್ನು ಬರೆದರು.

(ತಮ್ಮ ಗುರುವರ್ಯರಾದ ಗೋವಿಂದಭಗವತ್ಪಾದರನ್ನು ಕಂಡಾಗ ರಚಿಸಿದ) ದಶಶ್ಲೋಕಿ, (ಚಂಡಾಲ ರೂಪಿ ವಿಶ್ವೇಶ್ವರನನ್ನು ಕಂಡಾಗ ರಚಿಸಿದ) ಮನೀಷಾ ಪಂಚಕ, ದಕ್ಷಿಣಾಮೂರ್ತ್ಯಷ್ಟಕ, ಭಜಗೋವಿಂದ ಸ್ತೋತ್ರ, ಶಿವಭುಜಂಗಸ್ತೋತ್ರ, ಶಿವಾನಂದಲಹರಿ ಮುಂತಾದ ಸ್ತೋತ್ರ ರತ್ನಗಳು ಎರಡನೆಯ ಗುಂಪಿಗೆ ಸೇರಿದವು.

ವಿವೇಕ ಚೂಡಾಮಣಿ, ಅಪರೋಕ್ಷಾನುಭೂತಿ, ಸ್ವಾತ್ಮ ನಿರೂಪಣ ಪರಮಾರ್ಥಸಾರ, ಆತ್ಮಬೋಧ, ಉಪದೇಶ ಸಹಸ್ರಿ, ಪಂಚೀಕರಣ

ಪ್ರಕ್ರಿಯ, ಶತಶ್ಲೋಕೀ ಮುಂತಾದುವುಗಳನ್ನು ಮೂರನೆಯ ಗುಂಪಿಗೆ ಸೇರಿಸಬಹುದು.

ತಮ್ಮ ಅಲ್ಪವಾದ ಜೀವಮಾನದಲ್ಲಿ ಇಷ್ಟು ಕಾರ್ಯಗಳನ್ನು ನೆರವೇರಿಸಿದ ಶಂಕರರು, ಭೂಲೋಕದಲ್ಲಿ ತಮ್ಮಿಂದಾಗಬೇಕಾದ ಕಾರ್ಯದಲ್ಲಿ ಬಹುಭಾಗವು ಮುಗಿಯಿತೆಂದು ತಿಳಿದರು. ಮತ್ತು ತಮ್ಮ ಕೊನೆಯ ದಿನಗಳನ್ನು ಕಳೆಯುವುದಕ್ಕಾಗಿ, ಸಶಿಷ್ಯರಾಗಿ ಬದರಿ ಕಾಶ್ರಮವನ್ನು ಸೇರಿದರು. ಅಲ್ಲಿ ಕೆಲವು ದಿವಸಗಳಿದ್ದು ಪತಂಜಲಿಯ ಅನುಯಾಯಿಗಳಿಗೆ ಶಾರೀರಿಕ ಭಾಷ್ಯವನ್ನು ಬೋಧಿಸಿದರು ಮತ್ತು ಕೆಲವು ಗ್ರಂಥಗಳನ್ನೂ ರಚಿಸಿದರು.

ಆಮೇಲೆ ಆಚಾರ್ಯರು ಬದರಿಕಾಶ್ರಮವನ್ನು ಬಿಟ್ಟು ಕೇದಾರ ವೆಂಬ ಪವಿತ್ರ ಕ್ಷೇತ್ರವನ್ನು ಸೇರಿದರು. ಅಲ್ಲಿ "ಕೇದಾರನಾಥ"ನೆಂಬ ಹೆಸರಿನಿಂದ ಪ್ರಖ್ಯಾತನಾದ ಶಿವನನ್ನು ಅರ್ಚಿಸುತ್ತಾ ಕಾಲಕಳೆದರು. ಅಲ್ಲಿನ ಅತ್ಯಧಿಕವಾದ ಶೈತ್ಯವನ್ನು ತಡೆಯುಕೊಳ್ಳಲಾರದೆ ಭಕ್ತಾದಿಗಳು ತಲ್ಲಣಿಸುತ್ತಿರುವುದನ್ನು ಕಂಡು ಕರುಣಾಳುವಾದ ಶಂಕರರು ಈಶ್ವರನನ್ನು ಪ್ರಾರ್ಥಿಸಿದರು. ಆಗ ಶಿವನ ಪಾದಗಳಿಂದ ಉಷ್ಣೋದಕ ಪ್ರವಾಹವು ಹರಿದು ಬಂದು ಒಂದು ಸರೋವರವು ಏರ್ಪಟ್ಟಿತು. ಇಂದಿಗೂ ಭಕ್ತಾದಿಗಳು ಆ ಬಿಸಿನೀರಿನ ಸರೋವರದಲ್ಲಿ (ಗೌರಿಕುಂಡ) ಸ್ನಾನ ಮಾಡಿ ಸಂತೋಷಪಡುತ್ತಾರೆ.

ಶಂಕರರು ಹುಟ್ಟಿ ಮೂವತ್ತೆರಡು ವರುಷಗಳು ಕಳೆಯಲು ಬ್ರಹ್ಮಾದಿ ದೇವತೆಗಳು ಬಂದು ಶಂಕರರನ್ನು ಕುರಿತು "ಆಚಾರ್ಯ! ನಿನ್ನಿಂದ ಭೂಲೋಕದಲ್ಲಿ ನಡೆಯಬೇಕಾದ ಕಾರ್ಯಗಳೆಲ್ಲವೂ ಸಾಂಗ ವಾಗಿ ನೇರವೇರಿದುವು. ಇನ್ನು ನೀನು ಕೈಲಾಸಕ್ಕೆ ತೆರಳಬಹುದು.

ಪಾರ್ವತೀರಮಣನಾದ ಪರಮೇಶ್ವರನು ನಿನ್ನ ಬರುವನ್ನೇ ಎದುರು ನೋಡುತ್ತಿದ್ದಾನೆ " ಎಂದು ಹೇಳಿ ಅಂತರ್ಧಾನರಾದರು.

ಕೂಡಲೇ, ಬ್ರಹ್ಮ, ವಿಷ್ಣು, ಮಹೇಶ್ವರರ ಸ್ವರೂಪರಾದ ದತ್ತಾತ್ರೇಯರು ಕಣ್ಣಿಗೆ ಗೋಚರರಾಗಿ ಶಂಕರರನ್ನು ಕರೆದುಕೊಂಡು ತಮ್ಮ ಗುಹೆಯ ಬಳಿಗೆ ಹೊರಟರು. ಪದ್ಮಪಾದ, ತೋಟಕ, ಹಸ್ತಾಮಲಕ, ಮತ್ತು ಸುರೇಶ್ವರರೇ ಮೊದಲಾದ ಶಿಷ್ಯರು ಅವರನ್ನು ಹಿಂಬಾಲಿಸಿ ನಡೆದರು.

ಪ್ರಕರಣ ೨೧

## ಗುಹಾ ಪ್ರವೇಶ

ಶ್ರೀಮಚ್ಛಂಕರ ಭಗವತ್ಪೂಜ್ಯಪಾದರು, ದತ್ತಾತ್ರೇಯರೊಡನೆ ಗುಹೆಯ ಬಳಿಗೆ ಬರುತ್ತಲೇ ಜೊತೆಯಲ್ಲಿದ್ದ ಸುರೇಶ್ವರಾಚಾರ್ಯರು ಶಂಕರಾಚಾರ್ಯರನ್ನು ಕುರಿತು " ಗುರುದೇವ ! ಇನ್ನು ಮೇಲೆ ನಾವು ನಿಮ್ಮನ್ನು ಈ ರೂಪದಲ್ಲಿ ಕಾಣಲಾರೆವು ; ನಿಮ್ಮ ಅಮೃತವಾಣಿಯನ್ನು ಸವಿಯಲಾರೆವು. ಶಿಷ್ಯರಾದ ನಮಗೆ ಅಂತಿಮ ಉಪದೇಶವನ್ನು ನೀಡಿ ನಮ್ಮನ್ನು ಅನುಗ್ರಹಿಸಬೇಕು " ಎಂದು ಪ್ರಾರ್ಥಿಸಿದರು.

ಶಂಕರರು ಅವರ ಪ್ರಾರ್ಥನೆಯನ್ನು ಅಂಗೀಕರಿಸಿ " ಪ್ರಿಯ ಶಿಷ್ಯರಿರಾ, ನಾನು ನಿಮಗೆ ಏನನ್ನು ಹೇಳಬೇಕಾಗಿದ್ದಿತೋ, ಅದನ್ನು ಹಿಂದೆಯೇ ತಿಳಿಸಿದ್ದೇನೆ. ಆದರೂ ಈಗ ಅದನ್ನೇ ಸಂಗ್ರಹವಾಗಿ ನಾಲ್ಕಾರು ಮಾತುಗಳಲ್ಲಿ ತಿಳಿಸುತ್ತೇನೆ " ಎಂದು ಹೀಗೆ ಹೇಳಿದರು :—

ಪ್ರಿಯ ಶಿಷ್ಯರಿರಾ !

ಲಬ್ಧ್ವಾ ಕಥಂಚಿನ್ನರ ಜನ್ಮ ದುರ್ಲಭಂ, ತತ್ರಾಪಿ ಪುಂಸ್ತ್ವಂ
ಶ್ರುತಿಪಾರ ದರ್ಶನಮ್।

ಯಃ ಸ್ವಾತ್ಮ ಮುಕ್ತ್ಯೈನ ಯತೇತ ಮೂಢಧೀಃ, ಸಹ್ಯಾತ್ಮಹಾ
ಸ್ವಂ ವಿನಿಹನ್ತ್ಯಸದ್ಗ್ರಹಾತ್ (ವಿವೇಕ ಚೂಡಾಮಣಿ)

ಮನುಷ್ಯ ಜನ್ಮವು ಬಹಳ ದುರ್ಲಭವಾದುದು. ಯಾವ ಜನ್ಮದಲ್ಲಿ ಶ್ರುತಿಯೇ ಮೊದಲಾದುವುಗಳ ಜ್ಞಾನವನ್ನು ಪಡೆಯಬಹುದೋ ಅಂತಹ ಪುರುಷ ಜನ್ಮವನ್ನು ಜನ್ಮಾಂತರಗಳ ಪುಣ್ಯವಿಶೇಷದಿಂದ ಹೊಂದಿಯೂ ಸಹ ಯಾವನು ತನ್ನ ಮುಕ್ತಿಗಾಗಿ ಪ್ರಯತ್ನಿಸುವುದಿಲ್ಲವೋ ಆ ಮೂಢನು ಆತ್ಮಘಾತುಕನು. ಅವನು ಅಸತ್ತಿನಲ್ಲಿ (ಜಗತ್ತಿನಲ್ಲಿ) ಆಸಕ್ತನಾಗಿ ತನ್ನನ್ನು ತಾನೇ ನಾಶಕ್ಕೆ ಗುರಿಮಾಡಿಕೊಳ್ಳುತ್ತಾನೆ. ನರಜನ್ಮ ಬಂದಾಗ ಕೇವಲ ಭೋಗಾಸಕ್ತರಾಗಿ ಜೀವನವನ್ನು ವ್ಯರ್ಥಮಾಡಿಕೊಳ್ಳುವುದು ಹೇಯವಾದುದು.

ಚರ್ಮ, ಮಾಂಸ, ರಕ್ತ, ಸ್ನಾಯು (ನರ) ಮೇದಸ್ಸು, ಮಜ್ಜಾ ಮತ್ತು ಮೂಳೆಗಳಿಂದ ಕೂಡಿ ಮಲ-ಮೂತ್ರಗಳ ಭಾಂಡವಾಗಿರುವ ಈ ದೇಹ ನಿಂದ್ಯವಾದುದು. ಮೂಢರು ಈ ದೇಹವನ್ನೇ 'ನಾನು' ಎಂದು ತಿಳಿಯುವರು. ಸ್ಥೂಲದೇಹವನ್ನೇ ತಾನೆಂದು ತಿಳಿಯುವ ಅಜ್ಞಾನವೇ ಮಾಯೆ. ತ್ರಿಗುಣಾತ್ಮಿಕವಾದ ಅವಿದ್ಯೆಯೇ ಪರಮೇಶ್ವರನ ಪರಾ ಶಕ್ತಿಯಾದ ಮಾಯೆ. ಈ ಮಾಯೆಯಿಂದ ಬಿಡುಗಡೆ ಹೊಂದುವುದೇ ಮನುಷ್ಯನ ಮುಖ್ಯ ಕರ್ತವ್ಯ. ಮಾಯೆಯು ನಾಶವಾದರೆ ಜ್ಞಾನವು ತಾನಾಗಿಯೇ ಲಭಿಸುವುದು.

ಅಸ್ತಿಕಶ್ಚಿತ್ ಸ್ವಯಂ ನಿತ್ಯಮಹಂ ಪ್ರತ್ಯಯಲಂಬನಃ ।
ಅವಸ್ಥಾತ್ರಯ ಸಾಕ್ಷೀಸನ್ ಪಂಚಕೋಶವಿಲಕ್ಷಣಃ ॥
(ವಿವೇಕ ಚೂಡಾಮಣಿ)

'ನಾನು' ಎನ್ನುವುದಕ್ಕೆ ಆಧಾರ ರೂಪವಾದ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲಿಯೂ ಸಾಕ್ಷೀಭೂತ




ಶ್ರೀ ಶಂಕರರು ಗುಹಾಪ್ರವೇಶ ಮಾಡಿದುದು

ವಾಗಿದ್ದು, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಎಂಬ ಐದು ಕೋಶಗಳಿಂದ ದೂರವಾದ ಒಂದಾನೊಂದು ವಸ್ತುವಿದೆ. ಅದು ನಿತ್ಯವಾದುದು, ನಾಶವಿಲ್ಲದ್ದು. ಆ ವಸ್ತುವೇ ಆತ್ಮವು.

"ಬ್ರಹ್ಮ ಸತ್ಯಂ ಜಗನ್ಮಿಥ್ಯಾ" ಎಂದು ತಿಳಿಯುವುದೇ ನಿತ್ಯಾನಿತ್ಯ ವಸ್ತು ವಿವೇಕವು. ಬ್ರಹ್ಮ ವಸ್ತುವೊಂದೇ ಸತ್ಯ. ಅದನ್ನು ಬಿಟ್ಟ ಮಿಕ್ಕೆಲ್ಲ ವಸ್ತುಗಳೂ ಭ್ರಮೆಯಿಂದ ಕಲ್ಪಿತವಾದುವು. ಶೋಕ-ದುಃಖಗಳೆಂಬುವುದು ನಿಜವಾಗಿ ಇಲ್ಲ; ಪ್ರಪಂಚವೆಂಬುದು ಇಲ್ಲವೇ ಇಲ್ಲ. ಜಗತ್ತು ಸತ್ಯವಾದದ್ದೇ ಆಗಿದ್ದರೆ, ಜಾಗ್ರತ್-ಸ್ವಪ್ನ-ಸುಷುಪ್ತಿ-ಎಂಬ ಮೂರು ಕಾಲಗಳಲ್ಲಿಯೂ ಅದು ಗೋಚರವಾಗಿರಬೇಕಾಗಿತ್ತು. ಆದರೆ ಸುಷುಪ್ತ್ಯವಸ್ಥೆಯಲ್ಲಿ (ಗಾಢನಿದ್ರೆಯಲ್ಲಿ) ನಮಗೆ ಪ್ರಪಂಚದ ಅರಿವೇ ಆಗುವುದಿಲ್ಲ. ಆದುದರಿಂದ ಜಗತ್ತು ಸುಳ್ಳು ಎಂಬ ವಿಷಯ ಸಿದ್ಧವಾಯಿತು.

ಯನ್ನಾಽದೌ ಯಚ್ಚ ನಾಽಸ್ತ್ಯನ್ತೇ ತನ್ಮಧ್ಯೇ ಭಾರಮಪ್ಯಸತ್ ।
ಅತೋ ಮಿಥ್ಯಾ ಜಗತ್ಸರ್ವಮಿತಿ ವೇದಾಂತ ಡಿಂಡಿಮಃ ॥

(ವೇದಾಂತ ಡಿಂಡಿಮ)

ಜಗತ್ತು ಆದಿಯಲ್ಲೂ ಇಲ್ಲದೆ, ಅನ್ತ್ಯದಲ್ಲಿಯೂ ಇಲ್ಲದೆ, ಮಧ್ಯದಲ್ಲಿ ಮಾತ್ರ ತೋರಿಬರುವುದು. ಆದುದರಿಂದ ಜಗತ್ತು ಸುಳ್ಳು, ಅದು ಭ್ರಮೆಯಿಂದ ಕಲ್ಪಿತವಾದುದು. ಕಪ್ಪೆಯ ಚಿಪ್ಪನ್ನು ಕಂಡು, ಬೆಳ್ಳಿಯೆಂದು ಮೋಸ ಹೋಗುವುದುಂಟು. ಆದರೆ ನಿಜವಾಗಿಯೂ ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯಿಲ್ಲ. ಹೇಗೆ ಇಲ್ಲದ ಬೆಳ್ಳಿಯನ್ನು ಇದೆಯೆಂದು ಕಲ್ಪಿಸಿಕೊಳ್ಳುವೆವೋ ಹಾಗೆಯೇ ಇಲ್ಲದ ಪ್ರಪಂಚವನ್ನೂ ಇದೆಯೆಂದು ಕಲ್ಪಿಸಿಕೊಳ್ಳುತ್ತೇವೆ. ಇದಕ್ಕೂ ಅಜ್ಞಾನವೇ ಕಾರಣ.

ನಸುಗತ್ತಲೆಯಲ್ಲಿ ಹಗ್ಗವನ್ನು ನೋಡಿ, 'ಹಾವು' ಎಂದು ಭ್ರಾಂತಿ ಪಟ್ಟು ಗಾಬರಿಗೊಳಗಾಗುವ ಸನ್ನಿವೇಶಗಳುಂಟು. ಅಲ್ಲಿ ನಿಜವಾಗಿರುವುದು ಹಗ್ಗ ; ಆದರೆ ನಾವು ಕಲ್ಪಿಸಿಕೊಳ್ಳುವುದು ಹಾವು ಎಂದು. ದೀಪವನ್ನು ತಂದು ಹಿಡಿದಾಗ 'ಇದು ಹಾವಲ್ಲ ; ಹಗ್ಗ' ಎಂಬ ಜ್ಞಾನವುಂಟಾಗುವುದು ಮತ್ತು ಹಾವಿನ-ಭಯವೂ ಹೋಗುವುದು. ಹಾಗೆಯೇ ಅವಿದ್ಯೆಯೆಂಬ ಕತ್ತಲನ್ನು ಜ್ಞಾನವೆಂಬ ದೀಪದಿಂದ ಹೋಗಲಾಡಿಸಿದರೆ ಮಾಯೆಯೆಂಬ ಭ್ರಾಂತಿಯು ತಾನಾಗಿಯೇ ನಾಶವಾಗುವುದು, ಮತ್ತು ಭವಭೀತಿಯು ತಪ್ಪುವುದು.

ಆತ್ಮಜ್ಞಾನವನ್ನು ಪಡೆದು "ದೇಹವೇ ನಾನು" "ಇವನು ನನ್ನ ಮಗ" "ಇವಳು ನನ್ನ ಹೆಂಡತಿ" ಎಂಬ ಮೋಹವನ್ನು ತ್ಯಜಿಸಬೇಕು.

"ಮೋಹ ಏವ ಮಹಾಮೃತ್ಯುರ್ಮುಮುಕ್ಷೋರ್ವಪುರಾದಿಷು ।
ಮೋಹೋ ವಿನಿರ್ಜಿತೋ ಏನ ಸ ಮುಕ್ತಿ ಪದಮರ್ಹತಿ" (ವಿ.ಚೂ)

ದೇಹಾದಿಗಳಲ್ಲಿ ಮಮತೆಯನ್ನಿಡುವುದೇ ಮೋಕ್ಷಾಕಾಂಕ್ಷಿಗೆ (ಮುಮುಕ್ಷುವಿಗೆ) ದೊಡ್ಡ ಮೃತ್ಯುವು. ಯಾವನು ಮೋಹವನ್ನು ಗೆಲ್ಲುತ್ತಾನೆಯೋ ಅವನು ಮುಕ್ತಿಯನ್ನು ಪಡೆಯಲು ಯೋಗ್ಯನಾಗುವನು. ಆದರೆ ಈ ಮೋಹವನ್ನು ತ್ಯಜಿಸುವುದು ಸುಲಭ ಸಾಧ್ಯವಿಲ್ಲ. ಮನಸ್ಸು ಬಹಳ ಚಂಚಲವಾದುದರಿಂದ ವಿಷಯಾದಿಗಳಿಂದ ಆಕರ್ಷಿತವಾಗಿ ಮೋಹಕ್ಕೆ ವಶವಾಗುವುದು. ಆದರೂ ಶ್ರೀಕೃಷ್ಣನು "ಅಭ್ಯಾಸೇನತು ಕೌಂತೇಯ, ವೈರಾಗ್ಯೇಣ ಚ ಗೃಹ್ಯತೇ" ಎಂದು ಹೇಳಿರುವಂತೆ ಮನಸ್ಸನ್ನು ಅಭ್ಯಾಸದಿಂದಲೂ ಮತ್ತು ವೈರಾಗ್ಯದಿಂದಲೂ ತಡೆಗಟ್ಟಬಹುದು. ವಿಷಯಗಳನ್ನು ಅನುಭವಿಸಿದಷ್ಟೂ ಅವುಗಳಲ್ಲಿನ ಆಸಕ್ತಿ ಮತ್ತೂ ಹೆಚ್ಚುವುದು. ಐಹಿಕ ಸುಖಗಳಲ್ಲಿ ವೈರಾಗ್ಯವನ್ನು ಹೊಂದು

ವುದರಿಂದ, ಮೋಹಾತೀತರಾಗಬಹುದು. ಮೋಹಕ್ಕೆ ಸರಿಯಾದ ಮದ್ದು ವೈರಾಗ್ಯವೇ ಹೊರತು ಮತ್ತಾವುದೂ ಅಲ್ಲ.

ವೈರಾಗ್ಯಸ್ಯ ಫಲಂ ಬೋಧೋ ಬೋಧಸ್ಯೋ ಪರತಿಃಫಲಮ್ ।
ಸ್ವಾನಂದಾನುಭವಾಚ್ಛಾನ್ತಿರೇ ಷೈವೋಪರತೇಃ ಫಲಮ್ ॥

(ವಿ. ಚೂ.)

ವೈರಾಗ್ಯದಿಂದ ವಿಷಯಾದಿಗಳಲ್ಲಿ ಉದಾಸೀನತೆ [ಉಪರತಿ] ಯುಂಟಾಗುವುವು. ಸ್ವಾನಂದಾನುಭವವೂ ಮತ್ತು ಅದರಿಂದ ಚಿತ್ತಶಾಂತಿಯೂ ಈ ಉಪರತಿಯ ಫಲವು.

ಯಲ್ಲಾಭಾನ್ನಾಪರೋ ಲಾಭೋ, ಯತ್ಸುಖಾನ್ನಾಪರಂ ಸುಖಂ
ಯಜ್ಞಾನಾನ್ನಾಪರಂ ಜ್ಞಾನಂ, ತದ್ಬ್ರಹ್ಮೇತ್ಯವಧಾರಯೇತ್

[ಆತ್ಮಬೋಧ]

ಯಾವುದನ್ನು ಹೊಂದುವುದರಿಂದ ಮತ್ತಾವುದನ್ನು ಹೊಂದಬೇಕಾಗಿಲ್ಲವೋ; ಯಾವ ಸುಖವನ್ನು ಅನುಭವಿಸುವುದರಿಂದ ಬೇರೆ ಯಾವ ಸುಖವೂ ಉಳಿದಿರುವುದಿಲ್ಲವೋ ; ಯಾವುದನ್ನು ತಿಳಿಯುವುದರಿಂದ, ಇನ್ನೂ ತಿಳಿಯಬೇಕಾದುದು ಆವುದೂ ಉಳಿದಿರುವುದಿಲ್ಲವೋ ; ಅದನ್ನು 'ಬ್ರಹ್ಮ' ಎಂದು ತಿಳಿಯತಕ್ಕದ್ದು. ಯಾವುದು ಎಲ್ಲವನ್ನೂ ತಿಳಿಯುವುದೋ ಮತ್ತು ಯಾವುದರಿಂದಲೂ ತಿಳಿಯಲ್ಪಡುವುದಿಲ್ಲವೋ ಅದೇ ಬ್ರಹ್ಮವು.

ಜನ್ಮವೃದ್ಧಿ ಪರಿಣತ್ಯ ಪಕ್ಷಯ
ವ್ಯಾಧಿನಾಶ ವಿಹೀನಮವ್ಯಯಂ ।
ವಿಶ್ವಸೃಷ್ಟ್ಯವನ ಘಾತಕಾರಣಂ
ಬ್ರಹ್ಮತತ್ತ್ವಮಸಿ ಭಾವಯಾತ್ಮನಿ ॥ [ವಿ. ಚೂ.]

"ಹುಟ್ಟುವುದು, ಬೆಳೆಯುವುದು. ಬದಲಾವಣೆ ಹೊಂದುವುದು ಕ್ಷೀಣಿಸುವುದು, ವ್ಯಾಧಿಗೊಳಗಾಗುವುದು, ಮತ್ತು ನಾಶಹೊಂದುವುದು ಎಂಬ ಆರು ವಿಕಾರಗಳಿಂದ ದೂರವಾದ; [ವಿಕಾರಗಳನ್ನು ಹೊಂದದ] ಅವಿನಾಶಿಯಾದ; ಮತ್ತು ಪ್ರಪಂಚದ ಸೃಷ್ಟಿ, ಸ್ಥಿತಿ ಮತ್ತು ಲಯ ಕಾರ್ಯಗಳಿಗೆ ಕಾರಣವಾದುದೇ ಬ್ರಹ್ಮ ವಸ್ತುವು. ಅದೇ ನೀನು. ಮನಸ್ಸಿನಲ್ಲಿ, ಇದನ್ನು ಚೆನ್ನಾಗಿ ತಿಳಿ.

"ಸ್ವಯಂ ಬ್ರಹ್ಮಾ ಸ್ವಯಂ ವಿಷ್ಣುಃ, ಸ್ವಯಮಿಂದ್ರಃ ಸ್ವಯಂ ಶಿವಃ । ಸ್ವಯಂ ವಿಶ್ವಮಿದಂ ಸರ್ವಂ ಸ್ವಸ್ಮಾದನ್ಯನ್ನ ಕಿಂಚನ॥ (ವಿ. ಚೂ.) ನೀನೇ ಬ್ರಹ್ಮ, ನೀನೇ ವಿಷ್ಣು, ನೀನೇ ಇಂದ್ರ, ನೀನೇ ಶಿವ, ಮೇಲಾಗಿ ಅಖಂಡ ವಿಶ್ವವೇ ನೀನು. ನಿನ್ನನ್ನು ಬಿಟ್ಟು ಬೇರೆ ಯಾವ ವಸ್ತುವೂ ಇಲ್ಲ.

ದೇಹದಲ್ಲಿನ ಆಗು-ಹೋಗುಗಳಿಗೆ ಸಾಕ್ಷೀಭೂತವಾಗಿದ್ದು ಅವುಗಳನ್ನು ತಿಳಿಯುವ ಚೈತನ್ಯ ಶಕ್ತಿಯೇ, 'ನಾನು' ಎನ್ನಿಸಿಕೊಳ್ಳುವ ಆತ್ಮವು. "ಇದು ನನ್ನ ಮನೆ" "ಇದು ನನ್ನ ಪುಸ್ತಕ" "ಇವನು ನನ್ನ ಮಗ" ಎಂದು ಹೇಳುವುದುಂಟು. ಇದರಿಂದ ಮನೆ, ಪುಸ್ತಕ, ಮಗ ಎಲ್ಲ ನನಗೆ ಸಂಬಂಧಪಟ್ಟಿರುವುದೆಂದೇ ಹೊರತು ನಾನೇ ಮನೆಯೆಂದಾಗಲಿ, ನಾನೇ ಪುಸ್ತಕವೆಂದಾಗಲಿ ಅಥವಾ ನಾನೇ ಮಗನೆಂದಾಗಲೀ ಅರ್ಥವಾಗುವುದಿಲ್ಲ. ಹಾಗೆಯೇ, "ಇದು ನನ್ನ ದೇಹ," ಎಂದು ಹೇಳುವುದರಿಂದ ನಾನು ದೇಹದಿಂದ ಬೇರೆಯಾದವನು ಎಂದು ತಿಳಿಯುವುದು. "ನನಗೆ ಸಂತೋಷವಾಯಿತು" "ಈಗ ನನಗೆ ಬೇಸರವಾಗಿದೆ" ಎಂಬುದಾಗಿ ಅರಿಯುವ ಚೈತನ್ಯ ಶಕ್ತಿಯೇ ಆತ್ಮ.

"ಅಹಂ ಬ್ರಹ್ಮಾಸ್ಮಿ (ಅಹಂ=ನಾನು, ಬ್ರಹ್ಮ=ಬ್ರಹ್ಮ, ಅಸ್ಮಿ=ಆಗಿದ್ದೇನೆ) (ಜೀವನೆನಿಸಿಕೊಳ್ಳುವ) ನಾನು ಬ್ರಹ್ಮ ವಸ್ತುವೇ ಆಗಿದ್ದೇನೆ.

ಸೋಽಹಂ (ಸಃ-ಅವನು, ಅಹಂ-ನಾನು) ಅವನೇ ನಾನು. ಆ ಬ್ರಹ್ಮ ವಸ್ತುವೇ ನಾನು" ಎಂಬುದಾಗಿ ಜೀವೇಶ್ವರೈಕ್ಯ ಜ್ಞಾನವನ್ನು (ಜೀವಾತ್ಮನು ಪರಮಾತ್ಮನಲ್ಲಿ ಐಕ್ಯನಾಗುವನು ಎಂಬ ಜ್ಞಾನವನ್ನು) ಹೊಂದಿರುವವನೇ ಜ್ಞಾನಿಯು.

ಘಟೇನಷ್ಟೇ ಯಥಾವ್ಯೋಮ ವ್ಯೋಮೈವ ಭವತಿಸ್ಫುಟಮ್
ತಥೈವೋಪಾಧಿವಿಲಯೇ ಬ್ರಹ್ಮೈವಬ್ರಹ್ಮವಿತ್ಸ್ವಯಂ ‖

(ವಿ. ಚೂ.)

ಮಣ್ಣಿನ ಘಟವು ಒಡೆದು ಹೋಗಲು, ಅದರೊಳಗಿನ ಬಯಲು (ಆಕಾಶ) ಹೊರಗಿನ ಬಯಲಿನಲ್ಲಿ ಸೇರಿ ಹೋಗುವಂತೆ, (ಉಪಾಧಿ) ದೇಹ ನಾಶವಾದನಂತರ ಜ್ಞಾನಿಯ ಆತ್ಮವು ಬ್ರಹ್ಮದಲ್ಲಿ ಐಕ್ಯವಾಗಿ ಬ್ರಹ್ಮವಸ್ತುವೇ ಆಗಿಹೋಗುವುದು.

"ಅಹೋಽಸ್ಮಾಕಮಲಂ ಮೋಹೈರಾತ್ಮಾ ಬ್ರಹ್ಮೇತಿ ನಿರ್ಭಯಮ್" ಅಹೋ! ದೇಹಾದಿಗಳಲ್ಲಿ ಮೋಹವು ಸಾಕು. ಅದರಿಂದ ಭಯವುಂಟು. ಆದರೆ ಆತ್ಮವು ಬ್ರಹ್ಮವೆಂದು ತಿಳಿದವನಿಗೆ ಭಯವೇ ಇಲ್ಲ.

"ಬ್ರಹ್ಮಾತ್ಮೈಕತ್ವ ಬೋಧೇನ ಮೋಕ್ಷಃ ಸಿದ್ಧ್ಯತಿ ನಾನ್ಯಥಾ" (ವಿ. ಚೂ.) (ಉಪ್ಪು ನೀರಿನಲ್ಲಿ ಲೀನವಾಗುವಂತೆ) ಆತ್ಮನು ಬ್ರಹ್ಮನಲ್ಲಿ ಲೀನನಾಗುವನು ಎಂಬ ಜ್ಞಾನ ಮಾತ್ರದಿಂದ ಮೋಕ್ಷವು ದೊರೆಯುವುದು. ಬೇರಾವ ವಿಧದಿಂದಲೂ ಮೋಕ್ಷವನ್ನು ಹೊಂದುವುದಕ್ಕೆ ಆಗುವುದಿಲ್ಲ.

'ಜೀವ-ಬ್ರಹ್ಮರಲ್ಲಿ ಬೇಧವಿಲ್ಲ' ಎಂಬ ಜ್ಞಾನವನ್ನು ಪಡೆದವನು ಜೀವನ್ಮುಕ್ತನೆನಿಸುವನು. ಈತನು ಯಾವ ಕರ್ಮವನ್ನೂ ಮಾಡಬೇಕಾಗಿಲ್ಲ. ಈತನಿಗೆ ಕರ್ಮದಿಂದಾಗ ಬೇಕಾದುದೇನೂ ಇಲ್ಲ. ಕರ್ಮವು ಜ್ಞಾನವನ್ನು ಹೊಂದಲು ಒಂದು ಸಾಧನ. ಆ ಅದ್ವೈತ ಜ್ಞಾನವನ್ನು ಪಡೆದ ಮೇಲೆ ಕರ್ಮಾದಿಗಳಿಂದಾಗಬೇಕಾದುದೇನು ?

ಮಾಯಾಮಯಮಿದಮಖಿಲಂಹಿತ್ವಾ, ಬ್ರಹ್ಮಪದಂತ್ವಂ ಪ್ರವಿಶವಿದಿತ್ವಾ ||೧೧||
ದಿನ ಯಾಮಿನ್ಯೌ ಸಾಯಂಪ್ರಾತಃ ಶಿಶಿರವಸಂತೌ ಪುನರಾಯಾತಃ |
ಕಾಲಃ ಕ್ರೀಡತಿ ಗಚ್ಛತ್ಯಾಯುಃ ತದಪಿನಮುಂಚತ್ಯಾಶಾವಾಯುಃ || ೧೨ ||

## ಅನುಬಂಧ—೨

ಜಾಗ್ರತ್ಸ್ವಪ್ನ ಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಂಭತೇ
ಯಾ ಬ್ರಹ್ಮಾದಿ ಪಿಪೀಲಿಕಾನ್ತ ತನುಷು ಪ್ರೋತಾ ಜಗತ್ಸಾಕ್ಷಿಣೀ
ಸೈವಾಹಂ ನಚ ದೃಶ್ಯವಸ್ತ್ವಿತಿ ದೃಢ ಪ್ರಜ್ಞಾಪಿ ಯಸ್ಯಾಸ್ತಿ ಚೇತ್
ಚಂಡಾಲೋಽಸ್ತು ಸತುದ್ವಿಜೋಽಸ್ತು ಗುರುರಿತ್ಯೇಷಾಮನೀಷಾಮಮ || ೧ ||
ಬ್ರಹ್ಮೈವಾಹಮಿದಂ ಜಗಚ್ಚ ಸಕಲಂ ಚಿನ್ಮಾತ್ರವಿಸ್ತಾರಿತಂ
ಸರ್ವಂ ಚೈತದವಿದ್ಯಯಾ ತ್ರಿಗುಣಯಾ ಶೇಷಂ ಮಯಾ ಕಲ್ಪಿತಂ
ಇತ್ಥಂ ಯಸ್ಯದೃಢಾ ಮತಿಸ್ಸುಖತರೇ ನಿತ್ಯೇಪರೇ ನಿರ್ಮಲೇ
ಚಂಡಾಲೋಽಸ್ತು ಸತುದ್ವಿಜೋಽಸ್ತು ಗುರುರಿತ್ಯೇಷಾಮನೀಷಾಮಮ || ೨ ||
ಶಶ್ವನ್ನಶ್ವರ ಮೇವ ವಿಶ್ವಮಖಿಲಂ ನಿಶ್ಚಿತ್ಯವಾಚಾಗುರೋಃ
ನಿತ್ಯಂ ಬ್ರಹ್ಮ ನಿರಂತರಂ ವಿಮೃಶತಾ ನಿರ್ವ್ಯಾಜ ಶಾಂತಾತ್ಮನಾ |
ಭೂತಂ ಭಾವಿಚ ದುಷ್ಕೃತಂ ಪ್ರದಹತಾ ಸಂವಿನ್ಮಯೇಪಾವಕೇ
ಪ್ರಾರಬ್ಧಾಯ ಸಮರ್ಪಿತಂ ಸ್ವವಪುರಿತ್ಯೇಷಾಮನೀಷಾಮಮ || ೩ ||
ಯಾತಿರ್ಯಙ್ನರದೇವತಾಭಿರಹಮಿತ್ಯಂತಸ್ಫುಟಾಗೃಹ್ಯತೇ
ಯದ್ಭಾಸಾ ಹೃದಯಾಕ್ಷ ದೇಹವಿಷಯಾ ಭಾಂತಿ ಸ್ವತೋಽಚೇತನಾಃ |
ತಾಂ ಭಾಸ್ಯೈಃ ಪಿಹಿತಾರ್ಕಮಂಡಲನಿಭಾಂ ಸ್ಫೂರ್ತಿಂಸದಾ ಭಾವಯ್ರ
ಯೋಗೀ ನಿರ್ವೃತಮಾನಸೋಹಿ ಗುರುರಿತ್ಯೇಷಾಮನೀಷಾಮಮ || ೪ ||
ಯತ್ಸೌಖ್ಯಾಂಬುಧಿ ಲೇಶ ಲೇಶತ ಇಮೇ ಶಕ್ರಾದಯೋ ನಿರ್ವೃತಾ
ಯಚ್ಚಿತ್ತೇ ನಿತರಾಂ ಪ್ರಶಾಂತಕಲನೇ ಲಬ್ಧ್ವಾಮುನಿರ್ನಿರ್ವೃತಃ |
ಯಸ್ಮಿನ್ ನಿತ್ಯಸುಖಾಂಬುಧೌ ಗಲಿತಧೀರ್ಬ್ರಹ್ಮೈವ ಸ ಬ್ರಹ್ಮವಿತ್
ಯಃ ಕಶ್ಚಿತ್ಸಸುರೇಂದ್ರವಂದಿತಪದೋ ನೂನಂ ಮನೀಷಾಮಮ || ೫ ||
|| ಮನೀಷಾ ಪಂಚಕಂ ||

———

ಶ್ರೀಃ

# ಶ್ರೀಗುರುನಾಮಾಮೃತಂ

॥ ಶ್ಲೋಕಃ ॥

ಷಣ್ಮತಸ್ಥಾಪನಾಚಾರ್ಯಮದ್ವೈತಾನಂದರೂಪಿಣಂ ।
ಜಗದ್ಗುರುಮಹಂವಂದೇ ಶ್ರೀಮಚ್ಛಂಕರದೇಶಿಕಂ ॥

ಶ್ರೀಮಚ್ಛಂಕರರೂಪಗುರೊ ।
ಕಾಮಿತವಿತರಣಲೋಕಗುರೊ ॥
ವಿಬುಧಪ್ರಾರ್ಥಿತಲೋಕಗುರೊ ।
ಅಬುಧಮುಃಾಂಧಸುದೀಪಗುರೊ ॥
॥ ೧ ॥

ಕಲಿಬಾಧಿತಸಂತ್ರಾತಗುರೊ ।
ಕಾಲಟ್ಯುದ್ಭವಲೋಕಗುರೊ ॥
ದ್ವಿಜವರಶಿವಗುರುಪುತ್ರಗುರೊ ।
ನಿಜಧರ್ಮಾಂಬಾಮುದಿತಗುರೋ ॥
॥ ೨ ॥

ಶೈಶವಚಿತ್ರಚರಿತ್ರಗುರೊ ।
ಈಶಾದ್ಯಮರಗಣೇಢ್ಯಗುರೊ ॥
ವ್ಯಾಜಾಂಚಿತನರಭಾವಗುರೊ ।
ನೈಜಪ್ರತಿಭೋಲ್ಲಸಿತಗುರೊ ॥
॥ ೩ ॥

ಅಧೀತವೇದವಿನೋದಗುರೊ ।
ಸುಧಾಂಶುಸುಂದರವದನಗುರೊ ॥
ಸಕಲಶ್ರುತಿಮತದಕ್ಷಗುರೊ ॥
ಶುಕಮುಖಸಮ್ಮತಭಾವಗುರೊ ॥
॥ ೪ ॥

ನಿಖಿಲಾಗಮುಕಮಲಾರ್ಕಗುರೊ ।
ಸುಖಬೋಧಿತಸಕಲಾರ್ಥಗುರೊ ॥
ಮಾತೃಭಕ್ತಿಪರಿಪೂರ್ಣಗುರೊ ।
ಶ್ರೋತೃಜನಾದ್ಭುತಚರಿತಗುರೊ ॥
॥ ೫ ॥

ಶ್ರುತಿಸಮ್ಮತಯತಿವೇಷಗುರೊ ।
ಸತತವಿಚಿಂತಿತಬ್ರಹ್ಮಗುರೊ ॥
ಗೋವಿಂದಾತ್ಮಸುಬೋಧಗುರೊ ।
ಆನಂದಾಬ್ಧಿಮೃಗಾಂಕಗುರೊ ॥
॥ ೬ ॥

ದುರ್ಮತಪರ್ವತಕುಲಿಶಗುರೊ ।
ನಿರ್ಮಲಬೋಧಾನಂದಗುರೊ ॥
ವಿರಚಿತಭಾಷ್ಯಬುಧೇಢ್ಯಗುರೊ ।
ನಿರುಪಮಪ್ರತಿಭೋಲ್ಲಾಸಗುರೊ ॥
॥ ೭ ॥

ಕಾಶೀಯಾತ್ರಾಸಕ್ತಗುರೊ ।
ಈಶಭಕ್ತಿಪರಿಪೂರ್ಣಗುರೊ ॥
ಸನಂದನಾದ್ಯಭಿವಂದ್ಯಗುರೊ ।
ಸುನಂದಿತಾಖಿಲಶಿಷ್ಯಗುರೊ ॥
॥ ೮ ॥

ಪಾಶುಪತದ್ರುಮಪರಶುಗುರೋ ।
ಧೀಶೋಭಿತವರೌಸೀಶಗುರೊ ॥
ಭೇದಮತೇಭಮೃಗೇಂದ್ರಗುರೊ ।
ವೇದಿತಶ್ರುತಿಗಣಲೋಕಗುರೊ ॥
॥ ೯ ॥

ವ್ಯಾಸಾಧೃತಶ್ರುತಿಭಾಷ್ಯಗುರೊ ॥
ಭಾಸೋಜ್ವಲವರದೇಹಗುರೊ ॥
ಮಂಡನವಾದಾಸಕ್ತಗುರೊ ।
ಖಂಡಿತತನ್ಮತಸಿಚಯಗುರೋ ॥
॥ ೧೦ ॥

ಸಾಧಿತಜೀವೇಶೈಕ್ಯಗುರೊ ।
ಬೋಧೋಜ್ವಲ ಬುಧಮಾನ್ಯಗುರೊ
ಮಂಡನಪಂಡಿತವಂದ್ಯಗುರೊ ।
ದಂಡೋಜ್ವಲದೋರ್ದಂಡ
ಗುರೊ ॥ ೧೧ ॥

ವಾಣೀವಾದಾಸಕ್ತಗುರೊ ॥
ಶೋಣಾಂಬರಸಮಭೂಪಗುರೊ ॥
ಚಾರ್ವಾಕೋರಗಗರುಡಗುರೊ ।
ಸೂರ್ಯಾಯುತಸಮತೇಜಗುರೊ ॥
॥ ೧೨ ॥

ಸ್ಥಾಪಿತಷಣ್ಮತಸಾರಗುರೊ ।
ತಾಪಾಪಹಮುನಿವಂದ್ಯಗುರೊ ॥
ಉಪ್ತಾದ್ವಯಸದ್ಬೀಜಗುರೊ ।
ಜಪ್ತಾದ್ಯಕ್ಷರಶಾಂತಗುರೊ ॥
॥ ೧೩ ॥

ಕರುಣಾಸಾಗರಪರಮಗುರೊ ।
ನಿರುಪಮಮಹಿಮಾನಿಲಯಗುರೊ ॥
ಜಿತವಾಗ್ದೇವೀವಾದಗುರೊ ।
ಕೃತಶೃಂಗೇರೀವಾಸಗುರೊ ॥
॥ ೧೪ ॥

ಹೃತ್ತಾಪಾಪಹಧೀರಗುರೊ ।
ಚಿತ್ತಸ್ಥೈರ್ಯದಭುವನಗುರೊ ॥
ಯೋಗಾರ್ಣವಯೋಗೀಂದ್ರಗುರೊ ।
ರಾಗಾಪಹಸುರಸೇವ್ಯಗುರೊ ॥
॥ ೧೫ ॥

ಅರಿಷಡ್ವರ್ಗಾತ್ತ್ರಾಹಿಗುರೊ ।
ವರಪದಸೇವಾಂದೇಹಿಗುರೊ ॥
ಶಿವಪೂರ್ವಕನೃಹರೀಡ್ಯಗುರೊ ।
ಶಿವಶಂಕರಸದ್ರೂಪಗುರೊ
॥ ೧೬ ॥

ಕಲಿಪರಿಹಾರಕಪರಮಗುರೊ ।
ಸುಲಲಿತವರಪದಕಮಲಗುರೊ ॥
ಶುದ್ಧಾದ್ವಯಶುಭಸುಖದಗುರೊ ।
ಸಧ್ಯಾನಸದಾನಂದಗುರೊ
॥ ೧೭ ॥

ಭಕ್ತಜನಾವನದಕ್ಷಗುರೋ ।
ಸಪ್ತದ್ವೀಪವಿಖ್ಯಾತಗುರೊ ॥
ತಾಪತ್ರಯಹರಣೈಕಗುರೊ ।
ಸ್ಥಾಪಿತಶ್ರೀಮಠಸಕಲಗುರೊ ॥
॥ ೧೮ ॥

ಸಕಲಜ್ಞಾನದಸರ್ವಗುರೋ ।
ಅಕಲಂಕಮನಸ್ಸೇವ್ಯಗುರೊ ॥
ಸಕಲಯತೀಂದ್ರವರಾಚಾರ್ಯಗುರೊ
ಸಕಲಾಭೀಷ್ಟದಕಲ್ಪಗುರೊ ॥
॥ ೧೯ ॥

ಸಂಗರಹಿತಸದ್ರೂಪಗುರೊ ।
ಮಂಗಳರೂಪಸುರೂಪಗುರೊ ॥
ಜಯಜಯಶಂಕರಲೋಕಗುರೊ ।
ಭಯಹರಶಂಕರಭುವನಗುರೊ ॥
॥ ೨೦ ॥

ಜಯಜಯಮಂಗಳಲೋಕಗುರೊ । ಜಯಶುಭಮಂಗಳ ಲೋಕಗುರೊ ॥

॥ ಶ್ರೀಗುರುಚರಣಾರವಿಂದಾರ್ಪಣಮಸ್ತು ॥

# ಗುರು-ಸಂದೇಶ

“ ಗುರುದೇವ ಗುರುದೇವ ದೊರಕಿದಿರಿ ಇಂದು ।
ಕೊರಗಿದೆನು ಸಂಸಾರದಗ್ನಿಯೊಳು ಬೆಂದು ॥ ೧
ನಾಧನ್ಯನಾದೆ ಗುರುವರ್ಯನನು ನೋಡಿ ।
ಬಾಧೆಯನು ತೊಲಗಿಸುವ ಬೋಧೆಯನು ನೀಡಿ ॥ ೨
ಸುಖವೆಂಬುದಿನಿತಿಲ್ಲ ಸಂಸಾರದೊಳಗೆ ।
ಮುಖದಲ್ಲಿ ನಗೆಯಿಲ್ಲ ಭಯವು ಮನದೊಳಗೆ ॥ ೩
ಈಶೋಕ ವೀಕೋಪ ವೀತಾಪವನ್ನು ।
ನಾಶಗೊಳಿಸುವ ಪರಿಯು ತಿಳಿಸಿರೆನಗಿನ್ನು” ॥ ೪ ॥

“ ಆವಾತ ಹೇಳಿದನು ನೀ ದುಃಖಿಯೆಂದು ?
ಭಾವನೆಯೊ? ಮೋಹ್ ಕನಸೊ ? ನುಡಿಯುತಿಹ ನೊಂದು ।
ಆನಂದವಿಲ್ಲೆಂದು ಹೇಳುತಿಹೆಯೇನು ? ।
ನಾನೆಂದರೇನೆಂದು ತಿಳಿದಿರುವೆ ನೀನು ”

“ ನಾನೆಂದರೇನೆಂದು ಕೇಳುವಿರಿ ದೇವ ।
ನಾನಿಲ್ಲಿ ಕಾಣಿಸೆನೆ ? ಬಳಲುತಿದೆ ಜೀವ ”

“ ಅನ್ನದಿಂದಲಿ ಬೆಳೆದ, ಇದು ನಿನ್ನ ದೇಹ ।
ತನ್ನ ತನುವನೆ ತಾನು ಎನ್ನುವುದೆ ಮೋಹ ॥ ೮
ಇದು ನನ್ನ ಮನೆಯೆಂದರಾ ಮನೆಯು ನಾನೆ ?
ಇದು ನನ್ನ ಮಠವೆಂದರಾ ಮಠವು ನಾನೆ ? ॥ ೯ ॥
ನನ್ನದೆಂದಾವಾವುದನು ಕರೆಯುವಿಯೋ ।
‘ ನಾನಾ ’ ಗಲಾರವವು ಚೆನ್ನಾಗಿ ತಿಳಿಯೋ ॥ ೧೦ ॥

‘ ನನ್ನತನು ’ ವೆಂದು ನುಡಿಯುವುದು ಜನ-ರೂಢಿ
ನನ್ನಿಯನು ತಿಳಿ ಶಂಕೆಯನ್ನು ಹೊರದೂಡಿ ॥ ೧೧
‘ ಸಂತೋಷಗೊಂಡಿಹೆನು ’, ‘ ದುಃಖಿಯಾಗಿಹೆನು ’
ಇಂತರಿವ ಚೈತನ್ಯ ಶಕ್ತಿಯೇ ‘ ನಾನು ’ ॥ ೧೨
ದೇಹ ನಾನೆಂದು ಹೇಳಲಾಗುವುದಿಲ್ಲ ।
ಶ್ರೀಹರನ ಕೃಪೆಯೆಲ್ಲದಿದನರಿಯಲೊಲ್ಲ ” ॥ ೧೩

" ಗುರುದೇವ ! ನೀ ಹರನ ಅಪರಾವತಾರ.
ಮರುಕ ತೋರುತೆ ದೇವ ! ನಿಜಪಥವ ತೋರ " ॥ ೧೪ ॥

† † † †

" ದೇಹಾತ್ಮ ಮನವೆಂಬುದಾಗಿ ಮೂರುಂಟು ।
ದೇಹವಿದು ರುಜೆ, ಶೋಕ, ತಾಪಗಳ ಗಂಟು ॥ ೧ ॥
ಆತ್ಮವೆಂಬುದು ಸಚ್ಚಿದಾನಂದ ರೂಪ ।
ಆತ್ಮನರಿಯಿನೆಂದೆಂದಿಗು ಶೋಕ-ತಾಪ ॥ ೨ ॥
ಒಂದೊಂದು ನಿಮಿಷದಲಿ ಬದಲಿಸುವ ಮನವು ।
ಮುಂದಿರುವ ರೂಪವನೆ ತೋರ್ಪ ದರ್ಪಣವು ॥ ೩ ॥
ಚಿಂತಿಸಿದ ರೂಪವನು ಪಡೆವುದೀ ಮನವು ।
ಇಂತು ತಿಳಿಯದೆಲೆ ಬನ್ನಪಡುವುದು ಜನವು ॥ ೪ ॥
ಸದಾನಂದ ರೂಪನೊಳಗಾತ್ಮನೊಳಗೆ ।
ಸದಾ ನಮ್ಮ ಮನವಿರಲಹುದು ಸುಖವೆಮಗೆ ॥ ೫ ॥
ಹುಟ್ಟು-ಸಾವುಗಳ, ರುಜೆ-ತಾಪಗಳ ಬೀಡು ।
ಒಟ್ಟನೊಳಗೀ ದೇಹ ಉರಿವ ಬೆಂಗಾಡು ॥ ೬ ॥
ದೇಹ-ಗೇಹದ ಚಿಂತೆಯೊಳಗಿರಲು ಮನವು ।
ಬಾಹ್ಯ ದುಃಖದೊಳು ತಲ್ಲಣಿಪುದನುದಿನವು ॥ ೭ ॥
ಆದಕಾಗಿ ಹೇಳುವೆನು ಬಿಡು ದೇಹ-ಚಿಂತೆ ।
ಮುದವಹುದು, ತೋರಿಕೆಯು ಜಗವೊಂದು ಸಂತೆ ॥ ೮ ॥
ವಿತ್ತ-ತನು-ಚಿಂತೆಗೊಳಗಾಗಲದು ಬಂಧು ।
ಚಿತ್ತವಾತ್ಮನೊಳು ನೆಲೆಸಲಹುದಾನಂದ ॥ ೯ ॥
ಧನ-ಜನದ, ಸತಿ-ಸುತರ, ಚಿಂತೆಯನು ಮಾಣು ।
ಮನದಲ್ಲಿ ಆನಂದರೂಪನನು ಕಾಣು ॥ ೧೦ ॥
ಭೋಗಕೊಳಗಾಗೆ ಭೋಗಿಯನು ತುಳಿದಂತೆ ।
ರಾಗವನು ತೊರೆದಲ್ಲಿ ಮೋಕ್ಷ ಪಡೆದಂತೆ ॥ ೧೧ ॥
ತಡೆಮನವ ಎತ್ತಂದರತ್ತ ಬಿಡದಂತೆ ।
ಕಡೆತನಕ ಪಡೆವೆಯಾನಂದ ಶಿವನಂತೆ " ॥ ೧೨ ॥

— ಸರ್ವಂ ಶ್ರೀ ಸದ್ಗುರು ಪಾದಾರವಿಂದಾರ್ಪಣಮಸ್ತು —

— ನಾ. ಮ. ಗಂ.

# ಚತುರಾಮ್ನಾಯ ಮಠಗಳು

| ಕ್ಷೇತ್ರ | ಮಠ | ದೇವರು | ಶಕ್ತಿ | ತೀರ್ಥ | ವೇದ | ಆಚಾರ್ಯ | ಮಹಾ ವಾಕ್ಯ |
|---|---|---|---|---|---|---|---|
| ದ್ವಾರಕಾ | ಕಾಲಿಕ | ಸಿದ್ಧೇಶ್ವರ | ಭದ್ರಕಾಳಿ | ಗೋಮತೀ | ಸಾಮ | ಪದ್ಮಪಾದ | ತತ್ತ್ವಮಸಿ |
| ಬದರೀ | ಜ್ಯೋತಿ | ನಾರಾಯಣ | ಪೂರ್ಣಗಿರಿ | ಅಲಕನಂದಾ | ಅಥರ್ವಣ | ಹಸ್ತಾಮಲಕ | ಅಯಮಾತ್ಮಾ ಬ್ರಹ್ಮ |
| ಜಗನ್ನಾಥ | ಗೋವರ್ಧನ | ಜಗನ್ನಾಥ | ವಿಶಾಲದೇವಿ | ಮಹಾದಧಿ | ಋಕ್ | ತೋಟಕ | ಪ್ರಜ್ಞಾನಂ ಬ್ರಹ್ಮ |
| ಶೃಂಗಗಿರಿ | ಶಾರದಾ | ಚಂದ್ರಮೌಳಿ | ಶಾರದಾದೇವಿ | ತುಂಗಾ | ಯಜುಃ | ಸುರೇಶ್ವರ | ಅಹಂ ಬ್ರಹ್ಮಾಸ್ಮಿ |

# ನಿಮ್ಮ ಗ್ರಂಥ ಭಾಂಡಾರದಲ್ಲಿರಲೇ ಬೇಕ

**ಕೆಲವು ನಾಲ್ಕಾರು ಆವೃತ್ತಿ ಪ್ರಕಟವಾಗಿ ಇಪ್ಪತ್ತು ಸಾವಿ**
**ಹೆಚ್ಚು ಪ್ರತಿಗಳು ಮಾರಾಟವಾಗಿರುವ ಜನಪ್ರಿಯ**

## ಪ್ರ ಕ ಟ ಣೆ ಗ ಳು

| | | | |
|---|---|---|---|
| ೧. | ಬಾಲರಾಮಾಯಣ | (ಸಚಿತ್ರ) | ೦— |
| ೨. | * ಬಾಲ ಜೈಮಿನಿ ಭಾರತ | ,, | ೦— |
| ೩. | ಕನ್ನಡ ಮಹಾ ಭಾರತ | ,, | ೦— |
| ೪. | * ಶ್ರೀ ಸದ್ಗುರು ಕಥಾ | ,, | ೦— |
| ೫. | ನಮ್ಮ ನಾಡಿನ ಪುಣ್ಯಕತೆಗಳು | ,, | ೦— |
| ೬. | ಅಮರಾವತಿಯ ಅರಸುಕುಮಾರ | ,, | ೦— |
| ೭. | ಸ್ವರ್ಣಹಂಸಗಳು | | ೦— |
| ೮. | ಶ್ರೀ ಶಂಕರ ವಿಜಯ | | ೧— |

## ಪತ್ತೇದಾರಿ ಕಾದಂಬರಿಗಳು

೯. ಕಾಣದಾದ ಹುಡುಗ
೧೦. ಮಲೆನಾಡ ಹ
೧೧. ಕುಮಾರಾಪಾರ್ಕ್
೧೨. ವಿಚಿತ್ರ ವ್ಯಾಪ
೧೩. ಸಿಕ್ಕಿಬಿದ್ದ ಸಾಹುಕಾರ
೧೪. ಪತ್ತೇದಾರನಿಲ್ಲ
೧೫. ಬಯಲಾದ ಭಯಂಕರ

**ಪ್ರ ತಿ ಪು ಸ್ತ ಕ ದ ಬೆಲೆ ಎಂ ಟಾ ಣೆ**

೧೬. ಮೆಚ್ಚಿದ ಕತೆಗಳು (ಅಚ್ಚಿನಲ್ಲಿದೆ)

* ಈ ಗುರುತಿನ ಪ್ರತಿಗಳು ತೀರಿವೆ

ಈ ಪುಸ್ತಕಗಳು ಎಲ್ಲಾ ನ್ಯೂಸ್ ಏಜೆಂಟರಲ್ಲೂ ದೊರೆಯು

ನೇರವಾಗಿ ಬಯಸುವವರು ಪುಸ್ತಕದ ಬೆಲೆಯೊಡನೆ ಪ್ರತಿ ಪುಸ್ತಕಕ್ಕೆ 0-1-
ವೆಚ್ಚ ಸೇರಿಸಿ (ನಂ.8ರಿಂದ ಮುಂದಿನಪುಸ್ತಕಗಳಿಗೆ ಅಂಚೆವೆಚ್ಚ ಪುಸ್ತಕಕ್ಕೆ
ಮನಿಯಾರ್ಡರು ಮಾಡಿ, ವಿ. ಪಿ ಇಲ್ಲ.

ಮಾರಾಟಗಾರರಿಗೆ ವಿಶೇಷ ರಿಯಾಯಿತಿ

ಆರ್. ಎನ್. ನ್ಯೂಸ್ ಏಜೆನ್ಸಿ, ೬೬೫, ಚಿಕ್ಕಪೇಟೆ, ಬೆಂಗಳೂ